ಪ್ರಚಾರ ಪುಸ್ತಕಮಾಲೆ

232

# ದ್ವಾದಶಾನುಪ್ರೇಕ್ಷೆ

ಡಾ. ಆರ್. ಎನ್. ವಿಜಯಲಕ್ಷ್ಮಿ



ಪ್ರಚಾರ ಪುಸ್ತಕಮಾಲೆ-೨೩೨

# ದ್ವಾದಶಾನುಪ್ರೇಕ್ಷೆ

ಡಾ. ಆರ್. ಎನ್. ವಿಜಯಲಕ್ಷ್ಮಿ




೧೯೮೨

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ, ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ, ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿಸಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನು ಉಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು, ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ–ಮುಂತಾದ ವಿಷಯ

ಗಳನ್ನು ಕುರಿತ ಇನ್ನೂರ ಮೂವತ್ತೊಂದು ಪುಸ್ತಕಗಳು ಪ್ರಕಟ ವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈಗ ಹೊರಬರುತ್ತಿರುವ ಡಾ. ಆರ್. ಎನ್. ವಿಜಯಲಕ್ಷ್ಮಿ ಅವರ 'ದ್ವಾದಶಾನುಪ್ರೇಕ್ಷೆ' ಎಂಬ ಕೃತಿ ಹೆಚ್ಚು ಜನಪ್ರಿಯ ವಾಗಲೆಂದು ಆಶಿಸುತ್ತೇನೆ.

ಕೆ. ಎಸ್. ಹೆಗ್ಡೆ
ಕುಲಪತಿ

ಮೈಸೂರು

ದ್ವಾದಶಾನುಪ್ರೇಕ್ಷೆ ವಿಜಯಣ್ಣನೆಂಬ ಜೈನಕವಿಯಿಂದ ರಚಿತವಾದ ಸಾಂಗತ್ಯ ಕೃತಿ. ಕವಿಯ ಹೆಸರು ನಮಗೆ ಈ ಕೃತಿಯ ಅಂತ್ಯದಲ್ಲಿ ದೊರೆಯುತ್ತದೆ.

ತ್ರಿಜಗದಭ್ಯುದಯ ಪದವ ನೀವುದೀ ಶಾಸ್ತ್ರ
ಸುಜನರು ಭಾವಿಸುವರಿಗೆ
ಅಜರಾಮರವಿದು ಜಿನಭಾಷೆ ತಪ್ಪದು
ವಿಜಯಣ್ಣಗಳು ಪೇಳಿದರು (೧೨–೨೭)

ಕವಿ ತನ್ನ ಕೃತಿಯನ್ನು 'ನಿಧಿದ್ರವ್ಯಪುರಮಿಂದು' ಶಕಕಾಲದಲ್ಲಿ (೧೨–೩೯) ಬರೆದು ಪೂರೈಸಿದೆನೆಂದು ಹೇಳಿರುವುದರಿಂದ ಈ ಕೃತಿ ಕ್ರಿ.ಶ. ೧೪೪೭ರಲ್ಲಿ ರಚಿತವಾದುದೆಂಬುದು ತಿಳಿಯುತ್ತದೆ. ಇದನ್ನೇ ನಾವು ಕವಿಯ ಕಾಲವೆಂದು ಗ್ರಹಿಸಬಹುದು. ಹದಿನಾರು ಪದ್ಯಗಳ 'ಏಕಾದಶಭೇದ' ಅಥವಾ 'ಶ್ರಾವಕನೆಲೆ' ಎಂಬ ಇನ್ನೊಂದು ಕೃತಿಯಲ್ಲೂ ವಿಜಯಣ್ಣನೆಂಬ ಕವಿಯ ಹೆಸರಿದೆ. ಮೊದಲಿಗೆ ನಾವು ಉದ್ಧರಿಸಿದ ಪದ್ಯದ ಸಾಮ್ಯತೆ ಇದರಲ್ಲೂ ಉಂಟು.

ತ್ರಿಜಗದಭ್ಯುದಯ ನಿಶ್ರೇಯಸ ಸುಖಗಳ
ಭಜಿಸುವ ಭವ್ಯರಿಗೀವ
ವಿಜಯಣ್ಣನೊಡೆಯ ಜಿನೇಶನ ಪದವಿಯ
ನಿಜದಿಮುಕ್ತಿಯ

ಇದರಿಂದ ದ್ವಾದಶಾನುಪ್ರೇಕ್ಷೆ, ಶ್ರಾವಕನೆಲೆ–ಈ ಎರಡು ಕೃತಿಗಳನ್ನೂ ಬರೆದವನು ವಿಜಯಣ್ಣ ಎಂಬ ಒಬ್ಬನೇ ಕವಿ

ಎಂಬುದು ನಮ್ಮ ತೀರ್ಮಾನ. ಇದಲ್ಲದೆ 'ಆಚಾರಕ್ರಮ' ಎಂಬ ಕೃತಿಯನ್ನು ವಿಜಯಣ್ಣನೆಂಬ ಕವಿ ಬರೆದಿದ್ದಾನೆ ಎಂಬುದು ಕರ್ಣಾಟಕ ಕವಿಚರಿತೆಯಿಂದ ಗೊತ್ತಾಗುತ್ತದೆ. ಇಲ್ಲಿ ಹೇಳಿರುವ ವಿಜಯಣ್ಣನೂ ನಮ್ಮ ದ್ವಾದಶಾನುಪ್ರೇಕ್ಷೆಯ ವಿಜಯಣ್ಣನೂ ಅಭಿನ್ನರಿರಬಹುದು. ಜೈನತತ್ತ್ವಗಳನ್ನು ಕುರಿತು ಬರೆದ ಕೃತಿಗಳಿಂದಾಗಿ ನಮಗೆ ವಿಜಯಣ್ಣ ತಾತ್ವಿಕಪಂಡಿತ ಕವಿಯಾಗಿ ಕಾಣಿಸಿಕೊಳ್ಳುತ್ತಾನೆ.

ಕುಂತಳ ದೇಶದ ಬೆಳುವಲದಲ್ಲಿರುವ ಅಮ್ಮಿನಬಾವಿಯ ಸಂಘನಾಯಕ ಹೊನ್ನಬಂದಿಯ ದೇವಭೂಪ ಪ್ರೇಮದಿಂದ ಈ ಚರಿತ್ರವನ್ನು ವಿಜಯಣ್ಣನಿಂದ ಹೇಳಿಸಿದವನು (೧೨-೩೩, ೩೫, ೩೬). ದ್ವಾದಶಾನುಪ್ರೇಕ್ಷೆಯ ರಚನೆ ಅಮ್ಮಿನಬಾವಿಯ ಶಾಂತಿನಾಥನ ಬಸದಿಯಲ್ಲಿ ಪೂರ್ಣಗೊಂಡಿದೆ. ಈ ಅಮ್ಮಿನಬಾವಿ ಧಾರವಾಡ ಜಿಲ್ಲೆಗೆ ಎಂಟು ಮೈಲಿ ದೂರದಲ್ಲಿ ಇದೆ. ಅಲ್ಲಿ ಶಿಥಿಲವಾದ ಬಸದಿಯೊಂದು ಈಗಲೂ ಇರುವುದೆಂದೂ, ಅಲ್ಲಿರುವ ಪ್ರತಿಮೆ ಚಂದ್ರಪ್ರಭನದೆಂದೂ ತಿಳಿಯಿತು. ಬಹುಶಃ ಮೂಲ ಪ್ರತಿಮೆ ಹಾಳಾಗಿ ಇದನ್ನು ಹೊರಗಿನಿಂದ ತಂದಿರಿಸಿರಬಹುದು.

ಜೈನರಲ್ಲಿ ಪ್ರಸಿದ್ಧವಾಗಿರುವ ನಾಲ್ಕು ದಾನಗಳಲ್ಲಿ ನಿರತನಾಗಿದ್ದ ದೇವಭೂಪ ದ್ವಾದಶಾನುಪ್ರೇಕ್ಷೆಯ ಪ್ರತಿಗಳನ್ನು ಮಾಡಿಸಿ, ಅವನ್ನು ಸತ್ಪಾತ್ರಕ್ಕೆ ದಾನ ಮಾಡಿರಬಹುದು. ಸಂಸ್ಕೃತ, ಪ್ರಾಕೃತ ಭಾಷೆಗಳನ್ನು ಅರಿಯದ ಲೋಕದ ಭವ್ಯ ಜನರಿಗಾಗಿ ಲೋಕೋಪಕಾರ ನಿಮಿತ್ತವಾಗಿ ಈ ಕೃತಿಯನ್ನು ದೇವಭೂಪ ಹೇಳಿಸಿದ್ದಾನೆ. ಇಲ್ಲಿ ಆ ರಾಜನ ಕನ್ನಡ ಪ್ರೇಮ ಚೆನ್ನಾಗಿ ವ್ಯಕ್ತವಾಗಿದೆ. ಕವಿಯೂ ಆ ರಾಜನ ಪ್ರೋತ್ಸಾಹವನ್ನು ಅತ್ಯಂತ ಕೃತಜ್ಞತಾ ಭಾವದಿಂದ ಸ್ಮರಿಸಿಕೊಳ್ಳುತ್ತಾನೆ.

ಅಡಕವಾದ ಮಾತುಗಳಲ್ಲಿ ಸತ್ಯಗರ್ಭಿತವಾದ ಅನುಭವವನ್ನು ತುಂಬಿ ವಚನಗಳನ್ನು ಬರೆದ ಸರ್ವಜ್ಞಕವಿಯ ಶೈಲಿ ನಮಗೆ ಈ ಕಾವ್ಯದಲ್ಲೀ ಕಾಣಸಿಗುತ್ತದೆ. ಕೆಲವಾರು ಹೋಲಿಕೆಗಳನ್ನು ಬಳಸಿಕೊಂಡು ವಿಜಯಣ್ಣ ಈ ಕೃತಿಯಲ್ಲಿ ಜೈನ ಧಾರ್ಮಿಕ ಚಿಂತನೆಗಳನ್ನು ನಿರೂಪಿಸುತ್ತಾನೆ. ಅನುಪ್ರೇಕ್ಷೆ ಎಂದರೆ ಧಾರ್ಮಿಕ ಚಿಂತನೆಗಳು ಎಂದಷ್ಟೇ ಅರ್ಥ. ಮಾನವ ಜನ್ಮ ದೊರಕೊಳ್ಳುವುದೇ ದುರ್ಲಭ. ಹಾಗೆ ಆ ಜನ್ಮದಲ್ಲಿ ಹುಟ್ಟಿದಾಗ ಹೇಗೆ ಬಾಳಬೇಕು ಎಂಬುದನ್ನು ಕವಿ ಈ ಚಿಂತನೆಗಳ ಮೂಲಕ ಚಿತ್ರಿಸಿದ್ದಾನೆ. ಅನುಪ್ರೇಕ್ಷೆಗಳನ್ನು ಕುರಿತು ಬರೆದ ಕೃತಿಗಳು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಹಲವಾರಿವೆ. ಕನ್ನಡದಲ್ಲೂ ವಿಜಯಣ್ಣನ ಕೃತಿ ರಚನೆಗೆ ಮುಂಚೆ ಇದೇ ವಿಷಯವನ್ನು ಕುರಿತ 'ಜೀವಸಂಬೋಧನೆ' ಎಂಬ ಚಂಪೂಗ್ರಂಥದ ರಚನೆ ಆಗಿತ್ತು. ಆದ್ದರಿಂದ ಸಾಂಗತ್ಯದಲ್ಲಿ ಮಾತ್ರ ಈತ ಮೊದಲಿಗೆ ಈ ಅನುಪ್ರೇಕ್ಷೆಗಳನ್ನು ಕುರಿತ ಕೃತಿಯನ್ನು ಬರೆಯುತ್ತಿದ್ದಾನೆ ಎಂದು ನಾವು ಗ್ರಹಿಸಬೇಕು. 'ಜೀವಸಂಬೋಧನೆ'ಯಲ್ಲಿ ಸಂಸ್ಕೃತ ಪದಗಳ ಬಳಕೆ ವಿಶೇಷವಾಗಿದೆ. ಅದರ ರಚನೆಯಾದರೂ ಸಾಮಾನ್ಯ ಜನರಿಗೆ ಸುಲಭವಾಗಿ ಅರ್ಥವಾಗುವಂತಿಲ್ಲ. ಹೀಗಾಗಿ ಕವಿ ವಿಜಯಣ್ಣನಿಗೆ ಸರಳವಾಗಿ ಬರೆಯಬೇಕೆನ್ನುವುದೂ ಪ್ರಮುಖ ಉದ್ದೇಶವೇ ಆಗಿದೆ. ಸಾಮಾನ್ಯವಾಗಿ ಕಥೆಗಳನ್ನು ಹೇಳಿ ಅದರಿಂದ ತತ್ತ್ವನಿರೂಪಣೆ ಮಾಡಿದರೆ ಮನಸ್ಸಿಗೆ ಬೇಗ ಹಿಡಿಯುವುದುಂಟು. ಜೀವಸಂಬೋಧನೆಯ ನಿರೂಪಣೆಯಲ್ಲಿ ಕಥೆ, ನಂತರ ತತ್ತ್ವ ಎಂಬ ಕ್ರಮವೇ ಇದೆ. ಆದರೆ ವಿಜಯಣ್ಣ ಕಥೆಗಳ ತುಂಬಾ ಸಂಕ್ಷಿಪ್ತ ರೂಪವನ್ನು ಮಾತ್ರ ಕೊಟ್ಟು ತತ್ತ್ವವನ್ನು ವಿಶದವಾಗಿ ವರ್ಣಿಸುತ್ತಾನೆ. ಇದರಿಂದ ಕವಿಗೆ

ತೊಂದರೆ, ಸೌಲಭ್ಯ ಎರಡೂ ಉಂಟಾಗಿದೆ. ತೊಂದರೆ ಎಂದರೆ ಕಥೆಯ ನೆರವಿಲ್ಲದೆ ತತ್ತ್ವವೇ ಮನಸ್ಸಿಗೆ ಗ್ರಾಹ್ಯವಾಗುವಂತೆ ಹೇಳಬೇಕಾದ ಸಂದರ್ಭ. ಸೌಲಭ್ಯವೆಂದರೆ ಕಥೆಯ ವರ್ಣನೆಗೆ ಅವಕಾಶವಿಲ್ಲದೆ ಕೃತಿಗೆ ಒದಗಿರುವ ಸಂಕ್ಷಿಪ್ತತೆ.

೧೩೬೧ ಪದ್ಯಗಳು ಕೆಲವು ವಚನ ಖಂಡಗಳು–ಇವುಗಳಲ್ಲಿ ಈ ಕೃತಿ ವ್ಯಾಪಿತವಾಗಿದೆ. ಅನುಪ್ರೇಕ್ಷೆಗಳ ಒಟ್ಟು ಸಂಖ್ಯೆ ಹನ್ನೆರಡು. ಇದರಿಂದ ಕವಿ ತನ್ನ ಕೃತಿಯನ್ನು ೧೨ ಪರಿಚ್ಛೇದ ಗಳನ್ನಾಗಿ ವಿಭಾಗಿಸಿಕೊಂಡಿದ್ದಾನೆ.

ಪುಣ್ಯ, ಪಾಪ ಫಲಗಳು ಜೀವದೊಳಗೆ ಪ್ರವೇಶಿಸಿ ತೊಂದರೆಯನ್ನು ಉಂಟುಮಾಡುತ್ತವೆ. ಅವನ್ನು ತಡೆಹಿಡಿದು ಕರ್ಮ ಕ್ಷಯವಾಗುವ ಜ್ಞಾನವನ್ನು ತಿಳಿಯಬೇಕು. ಧರ್ಮಮಾರ್ಗ ದಲ್ಲಿಯೇ ನಡೆಯಬೇಕು. ಈ ದೇಹ ಅಶಾಶ್ವತವಾದುದು, ಅಶುಚಿಮಯವಾದುದು. ಬಂಧು, ಮಿತ್ರರು ಎಂದು ಸಂಭ್ರಮಿಸುವುದು ಸರಿಯಲ್ಲ. ಸುಖ, ಸಂತೋಷಗಳಿಗೆ ಬಂಧು ಬಳಗ ಬಂದು ಒದಗುವುದೇ ವಿನಾ ಕಷ್ಟ-ನಷ್ಟಕ್ಕಾಗಲೀ, ದುಃಖಕ್ಕಾಗಲೀ ಒದಗುವುದಿಲ್ಲ. ಕರ್ಮಫಲವನ್ನು ಜೀವ ತಾನೊಂದೇ ಅನುಭವಿಸಬೇಕು. ಆದ್ದರಿಂದ ಸುಲಭಸಾಧ್ಯವಲ್ಲದ ಧರ್ಮಮಾರ್ಗವನ್ನೂ, ಸುಜ್ಞಾನದರ್ಶನವನ್ನೂ ತಿಳಿದು ನಡೆಯಬೇಕು. ಇದು ಅನುಪ್ರೇಕ್ಷೆಗಳ ಮುಖ್ಯ ತತ್ತ್ವ ಮಾತ್ರವಲ್ಲ. ಸಾರಸರ್ವಸ್ವ. ಇಂತಹ ಚಿಂತನಾಂಶವುಳ್ಳ ಬೋಧನೆಗಳನ್ನು ಕೇಳಿಯೇ ನನ್ನಯ್ಯ ಶರಣ, ವಾಲ್ಮೀಕಿ ಮುಂತಾದವರು ಧರ್ಮಮಾರ್ಗದಲ್ಲಿ ನಡೆದರೆಂದು ಹೇಳುವ ಕಥೆಗಳು ಪ್ರಸಿದ್ಧವಾಗಿವೆ. ಇನ್ನು ವಿಜಯಣ್ಣನ ವಿವರಣೆಯಂತೆ ಒಂದೊಂದು ಅನುಪ್ರೇಕ್ಷೆಯನ್ನೂ ಪರಿಚಯಿಸಿ ಕೊಳ್ಳೋಣ. ಮೊದಲನೆಯದು ಅಧ್ರುವಾನುಪ್ರೇಕ್ಷೆ. ಇದಕ್ಕೆ ಅನಿತ್ಯಾನುಪ್ರೇಕ್ಷೆ ಎಂಬ ಹೆಸರೂ ಉಂಟು.

ಮೊದಲ ಪರಿಚ್ಛೇದದಲ್ಲಿ ಮೂವತ್ತೆರಡು ಪದ್ಯಗಳಿವೆ. ಇದರಲ್ಲಿ ಕವಿಯು ಪೀಠಿಕೆ ಹತ್ತೊಂಬತ್ತು ಪದ್ಯಗಳಲ್ಲಿ ಮುಗಿದು ಉಳಿದ ಇಪ್ಪತ್ತಮೂರು ಪದ್ಯಗಳಲ್ಲಿ ಅಧ್ರುವಾನುಪ್ರೇಕ್ಷೆಯ ವಿವರ ಬರುತ್ತದೆ. ಆರಂಭಕ್ಕೆ ಕವಿ ಜೀವಗಳ ಭೇದಗಳನ್ನು ವಿವರಿಸಿದ್ದಾನೆ. ಮುಕ್ತಿ ಜೀವಗಳು ಎಂಟು ಕರ್ಮಗಳನ್ನು ನಿರ್ಮೂಲ ಮಾಡಿಕೊಂಡು ಲೋಕಾಗ್ರದಲ್ಲಿ ಇರುತ್ತವೆ. ಈ ಕರ್ಮಗಳನ್ನೇ ಸ್ವೀಕರಿಸಿ, ಯಾವಾಗಲೂ ಮಿಥ್ಯಾತ್ವವನ್ನು ತ್ಯಜಿಸದೆ, ಹುಟ್ಟು ಸಾವುಗಳ ಚಕ್ರದಲ್ಲಿ ತೊಳಲುವ ಜೀವಗಳೇ ಸಂಸಾರಿ ಜೀವಗಳು. ಇವು ಆ ಹುಟ್ಟು ಸಾವುಗಳ ಬಂಧನದಿಂದಾಗಿ ಅಗಾಧವಾಗಿ ದುಃಖವನ್ನು ಅನುಭವಿಸಬೇಕಾಗುತ್ತದೆ. ಕರ್ಮಕ್ಕೆ ಪಕ್ಕಾಗಿರುವ ಭವ್ಯಜೀವಿಗಳಿಗೆ ಬೋಧಕರ ಉಪದೇಶದಿಂದ ಮಾತ್ರ ರಕ್ಷಣೆ ದೊರೆಯುತ್ತದೆ. ಹೀಗೆ ಹೇಳಿದ ವಿಜಯಣ್ಣ ಮುಂದೆ ಮಾನವ ಜನ್ಮದ ಅಗ್ಗಳಿಕೆಯನ್ನು ಪ್ರಸ್ತಾಪಿಸುತ್ತಾನೆ. ಮಾನವ ಜನ್ಮವು ಪವಿತ್ರವಾದುದು. ಉತ್ತಮ ಧರ್ಮವನ್ನು ಸಾಧಿಸಬೇಕಾದುದು ಈ ಜನ್ಮದಲ್ಲಿಯೇ, ಧರ್ಮವನ್ನು ಬಿಟ್ಟು ಭೋಗಕ್ಕೆ ಮರುಳಾಗುವವನು ಕುಡಿಯುವ ಹಾಲನ್ನು ಕಾಲು ತೊಳೆಯಲು ಉಪಯೋಗಿಸುವ ಮೂರ್ಖನಂತಾಗುತ್ತಾನೆ. ಮಾನವ ಜನ್ಮವನ್ನು ದುರುಪಯೋಗ ಪಡಿಸಿಕೊಳ್ಳಬಾರದೆಂದೂ, ಹಾಗೆ ಮಾಡುವವನು ಹುಚ್ಚ ಎಂದೂ ಕರೆದ ಕವಿಯ ವ್ಯಾಖ್ಯಾನ ಹೀಗಿದೆ :

ಪಡೆಯ ಬಾರದ ಮನುಜತ್ವವ ಪಡೆದೀಗ
ಹಿಡಿಯದೇಳಿಸೆ ಧರ್ಮವನು
ಪಡೆದ ರತ್ನವ ಶರಧಿಯೊಳೀಡಾಡಿದ
ಕಡುಮರುಳನ ತೆಱನಹುದು (೨೭)

ಎತ್ತನು (ಎತ್ತಾನು?) ಮಾನವಗತಿಯು ಪಡೆದು ಜೀವ
ಉತ್ತಮ ಧರ್ಮಕ್ಕಲಸಲು
ಮತ್ತೆ ಕಲ್ಪವೃಕ್ಷವ ಕಿತ್ತು ಮನೆಯುಲಿ
ದುತ್ತೂರ (ದತ್ತೂರ?) ವ ಬಿತ್ತುವಂತೆ (೨೮)

ನರನರ ಜನ್ಮವ ಪಡೆದು ಸದ್ಧರ್ಮಕೆ
ಪಿರಿದರ್ತಿಗಳನಲ್ಲದಿರಲು
ಓರಿಯು ಸುವರ್ಣದ ಹರಿವಾಣದಿ ಮಣ್ಣು
ನಿರದೆ ತೀವುವ ಮರುಳಂತೆ (೨೯)

'ರತ್ನವ ಶರಧಿಯೊಳೀಡಾಡಿದ ಮರುಳ', 'ಕಲ್ಪವೃಕ್ಷವ ಕಿತ್ತು ದುತ್ತೂರವ ಬಿತ್ತುವಂತೆ', 'ಸುವರ್ಣದ ಹರಿವಾಣದಿ ಮಣ್ಣನು ತುಂಬುವಂತೆ'—ಈ ಹೋಲಿಕೆಗಳುಳ್ಳ ಪ್ರಯೋಗಗಳು ಮಾನವ ಜನ್ಮವನ್ನು ಉಪಯುಕ್ತವಾಗಿ ಬಳಸಿಕೊಳ್ಳಬೇಕೆಂಬ ಆಶಯವನ್ನು ಸಾರ್ಥಕವಾಗಿ ವ್ಯಕ್ತಪಡಿಸಿವೆ. ರತ್ನವನ್ನು ಸಮುದ್ರದಲ್ಲಿ ಬಿಸಾಡಿದವನನ್ನು, ಫಲ ಕೊಡುವ ಕಲ್ಪವೃಕ್ಷವನ್ನು ಕಿತ್ತು ನಿಷ್ಪ್ರಯೋಜಕವಾದ ದುತ್ತೂರ ವೃಕ್ಷವನ್ನು ನೆಟ್ಟವನನ್ನು, ಚಿನ್ನದ ಪಾತ್ರೆಯಲ್ಲಿ ಮಣ್ಣನ್ನು ತುಂಬುವವನನ್ನು ನಾವು ಹುಚ್ಚ, ಮೂರ್ಖ ಎಂದು ಕರೆಯದೆ ಬಿಡುವೆವೇ? ಮಾನವನು ಅಧರ್ಮದಲ್ಲಿ, ದುಷ್ಕರ್ಮದಲ್ಲಿ ತೊಡಗಿದರೆ ರತ್ನವನ್ನು ಸಮುದ್ರದಲ್ಲಿ ಬಿಸಾಡಿದವನಂತೆಯೇ ಮೂರ್ಖ ಮಾತ್ರವಲ್ಲ ಹುಚ್ಚ ಕೂಡ ಎಂದು ಹೇಳುವುದು ಕವಿಯ ಭಾವ. ಅದು ಅವನ ಹೋಲಿಕೆಗಳ ಬಳಕೆಯಿಂದ ವಿಶೇಷವಾದ ಅವಧಾರಣೆಯೊಂದಿಗೆ ಚಿತ್ರರಗೊಂಡಿದೆ. ಮುಂದೆ ಕವಿ ಧ್ರುವ, ಅಧ್ರುವ ವಸ್ತುಗಳನ್ನು ಎಂದರೆ ನಾಶವಾಗದ, ನಾಶಹೊಂದುವ ವಸ್ತುಗಳನ್ನು ವರ್ಣಿಸುತ್ತಾನೆ.

ಈ ದೇಹ ಕ್ಷಣ ಭಂಗುರವಾದುದು. ಜಲದ ಬುದ್ಬುದದಂತೆ

ಅನಿತ್ಯವಾದುದು. ದೇವ, ಮಾನವರ ಆಯುಸ್ಸು ಅಸ್ಥಿರವಾದುದು. ಸುರ, ನರ, ಯಕ್ಷ ದೇವತೆ–ಈ ಎಲ್ಲರ ಐಶ್ವರ್ಯಗಳು, ಶ್ರೇಷ್ಠವಾದ ಮಣಿರತ್ನಗಳು, ಮಹಡಿ ಮನೆಗಳು, ಆರೋಗ್ಯ, ರೂಪು, ಯೌವನ–ಇವೆಲ್ಲವೂ ಕಾಮನ ಬಿಲ್ಲಿನಂತೆ ನಶ್ವರವಾದುವು. ಅದನ್ನು ಕವಿ ಹೀಗೆ ಹೇಳುತ್ತಾನೆ.

ದಿಕ್ಕು ದಿಕ್ಕುಗಳಿಂದ ಬಂದೊಂದು ಮರದಲ್ಲಿ
ಪಕ್ಷಿ ಕುಳಿತು ರಾತ್ರಿಯಲಿ
ಅರ್ಕನುದಯವಾಗೆ ತಮ ತಮ್ಮ ದಿಕ್ಕಿಗೆ
ದೊಕ್ಕನೆ ಪೋಪಂತೆ ಕಾಣ (೩೭)

ಹತ್ತಾರು ದಿಕ್ಕುಗಳಿಂದ ಬಂದ ಹಕ್ಕಿಗಳು ರಾತ್ರಿ ಕಾಲದಲ್ಲಿ ಮರದ ಮೇಲೆ ಕುಳಿತು ಬೆಳಗಾಗುತ್ತಿದ್ದಂತೆ ಹಾರಿಹೋಗುತ್ತವೆ. ಅವು ಮರದ ಮೇಲೆ ಕುಳಿತಿರುವ ಕಾಲ ಎಷ್ಟು ಅಲ್ಪವೋ ಐಶ್ವರ್ಯ ಆರೋಗ್ಯ ಮುಂತಾದುವುಗಳು ಇರುವುದೂ ಅಷ್ಟೇ ಅಲ್ಪ ಕಾಲ ಮಾತ್ರ. ಧ್ರುವವಾದ ವಸ್ತು ಎಂದರೆ ಅವಿನಾಶಿಯಾದ ಸುಜ್ಞಾನದರ್ಶನ ಮತ್ತು ಹಂಸಧರ್ಮ. ಇದನ್ನು ಅರಿತು ಸದ್ಧರ್ಮದಲ್ಲಿ ನಡೆಯಬೇಕು. ಇದು ಅನಿತ್ಯಾನುಪ್ರೇಕ್ಷೆಯ ವ್ಯಾಖ್ಯಾನ. ಅನಿತ್ಯಮಯವಾದ ಈ ಬಾಳಿನಲ್ಲಿ ಯಾವುದರಲ್ಲೂ ಭಾವಾವೇಶ ತಳೆಯದೆ ಅಥವಾ ಸಂಸಾರ ಸುಖವೇ ಶಾಶ್ವತವೆಂದು ಭ್ರಮಿಸದೆ ಯೋಗ್ಯವೂ, ಸಾತ್ವಿಕವೂ ಆದ ರೀತಿಯಲ್ಲಿ ಜೀವನವನ್ನು ನಡೆಸಬೇಕು. ಹೀಗೆ ಈ ಅನುಪ್ರೇಕ್ಷೆಯ ವ್ಯಾಖ್ಯಾನವನ್ನು ಅರ್ಥೈಸಿದರೆ ಮುನಿಧರ್ಮವೆನಿಸಿದ ಅನುಪ್ರೇಕ್ಷೆಯನ್ನು ಸಂಸಾರ ಜೀವಿಗಳೂ ಆಚರಣೆಗೆ ಒಗ್ಗಿಸಿಕೊಂಡಂತಾಗುತ್ತದೆ.

ಪಂಚಗುರುಗಳಾದ ಜಿನ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು–ಇವರುಗಳ ಸ್ಮರಣೆಯಿಂದ ಸಂಸಾರಭ್ರಮಣರೂಪವಾದ ಪಾಪವು ನಾಶವಾಗಿ ಮುಕ್ತಿ ದೊರೆಯುತ್ತದೆ ಎಂದು ವಿಜಯಣ್ಣ ಹೇಳುತ್ತಾನೆ. ಅದಕ್ಕೆ ನಿದರ್ಶನವಾಗಿ ಪಂಚಪದ ಸ್ಮರಣೆಯಿಂದ ಚೋರ, ಲಲಿತಾಂಗ ಮೊದಲಾದವರು ದೇವಗತಿ ಪಡೆದ ಕಥೆಗಳನ್ನು ಉಲ್ಲೇಖಿಸುತ್ತಾನೆ. ಆ ಪಂಚಪದ ಸ್ಮರಣೆಯಿಂದಾಗಿ ಮಾರಿ, ಕ್ರೂರಮೃಗ, ದುಃಖ ಇವು ಹತ್ತಿರ ಬರಲೂ ಅಂಜುವುವು ಎಂದೂ ಹೇಳಿದ್ದಾನೆ.

ಎರಡನೆಯದು ಅಶರಣಾನುಪ್ರೇಕ್ಷೆ. ಹುಟ್ಟು, ಸಾವು, ರೋಗ, ಮುಪ್ಪು–ಇವುಗಳ ಸಂಕೋಲೆಯಲ್ಲಿ ಸಿಲುಕಿದ ಸಂಸಾರಿ ಜೀವಕ್ಕೆ ರಕ್ಷಣೆ ಕೊಡುವವರು ಯಾರೂ ಇಲ್ಲ. ಯಮ ಬಂದು ಜೀವವನ್ನು ಎಳೆದೊಯ್ಯುವಾಗ ಗಿರಿ, ದುರ್ಗ, ವನ, ಸುರಲೋಕ, ಪಾತಾಳ ಲೋಕ–ಇವಲ್ಲಿ ಎಲ್ಲಿ ಹೊಕ್ಕರೂ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಬಲ್ಲವರು, ಬಂಧುಗಳು ಯಾರು ಜೊತೆಯಲ್ಲಿ ಇದ್ದರೂ ಪ್ರಾಣ ಹೋಗುವ ಕಾಲದಲ್ಲಿ ಏನೂ ಮಾಡಲು ಸಾಧ್ಯವಿಲ್ಲ. ಈ ಜೀವಕ್ಕೆ ರಕ್ಷಣೆ ಕೊಡುವುದು ಸದ್ಧರ್ಮವೊಂದೇ ವಿನಾ ಮತ್ತಾವ ಲೌಕಿಕ ವಸ್ತುವಲ್ಲ. ನಮ್ಮವರು ತಮ್ಮವರು ಎಂದು ಸಂಭ್ರಮಿಸುವುದು ಆಯುಸ್ಸು ತುಂಬುವತನಕ ಮಾತ್ರ ಎಂಬ ನಿತ್ಯಸತ್ಯವನ್ನು ಈ ಅನುಪ್ರೇಕ್ಷೆ ಹೇಳುತ್ತದೆ.

ದೇವೇಂದ್ರ ಮೊದಲಾದವರನ್ನೇ ಯಮನ ಹಿಡಿತದಿಂದ ತಪ್ಪಿಸಿ ಕಾಯುವಂತಹವರಿಲ್ಲ ಎಂದ ಮೇಲೆ ಮಾನವರೆಂಬ ಕೀಟಕರನ್ನು ಅವನ ವಜ್ರಮುಷ್ಟಿಯಿಂದ ರಕ್ಷಿಸುವವರಾರು? ಇದನ್ನಂತೂ ಕವಿ ಅತ್ಯಂತ ಮಾರ್ಮಿಕವಾಗುವ ರೀತಿಯಲ್ಲಿ ಹೀಗೆ ಹೇಳುತ್ತಾನೆ.

ಜೀವ ಮನೆಯು ಕಂಡು ಕೈಗೆ ಸಿಕ್ಕಿದ ಕೊಂಡು
ಸಾವಿಗಂಜ ದೋಡದಿರ್ದು
ತೀವಿದ ವಸ್ತುವೆಲ್ಲವ ತೆಗೆದೆನೆಂಬ
ಗಾವಿಲ ಬೇವಂತೆ ಜೀವ (೧೦)

ಕಿಚ್ಚಿದ್ದು ಉರಿಯುವ ಮನೆಯಂತೆ ಜೀವನ ಅಸ್ಥಿರವಾದುದು. ಉರಿತಾಕುವವರೆಗೆ ನಾವು ಜೀವಂತರು. ಉರಿ ಹತ್ತಿರವಾಗು ವಷ್ಟರಲ್ಲಿ ಕೈಗೆ ಸಿಕ್ಕ ಸಾಮಾನನ್ನು ತೆಗೆದುಕೊಂಡು ಓಡು ವಂತಹ ಬುದ್ಧಿವಂತನ ಕಾರ್ಯದಂತೆ ನಾವು ಈ ಅಶಾಶ್ವತವಾದ ಬಾಳಿನಲ್ಲಿ ಸದ್ಧರ್ಮವನ್ನು ಎತ್ತಿಕೊಂಡು ಬಾಳಬೇಕು. ಇಲ್ಲವೇ ಸಂಸಾರಸುಖಬೇಕು. ಅದೂ ನಾವು ಬಯಸಿದಂತೆ ಎನ್ನುತ್ತ ಕುಳಿತರೆ ಉರಿಹೊತ್ತಿರುವ ಮನೆಯಲ್ಲಿ ಎಲ್ಲ ಸಾಮಾನುಗಳನ್ನು ರಕ್ಷಿಸುತ್ತೇನೆ ಎಂದು ಹೊರಟು ತಾನೇ ಬೆಂದು ಹೋಗುವ ಹುಚ್ಚ ನಂತೆ ಸಂಸಾರ ಸುಖದ ಕಾವಿನಲ್ಲಿ ನಾವು ಬೆಂದುಹೋಗುತ್ತೇವೆ. ಹೀಗೆ ವಿಜಯಣ್ಣ ಅಸ್ಥಿರವಾದ ಜೀವನದ ಬಗೆಯನ್ನೂ ಅದರಲ್ಲಿ ಮಾನವ ಬಾಳಬೇಕಾದ ರೀತಿಯನ್ನೂ ಸಮರ್ಥನೀಯವಾಗಿ, ಶಕ್ತಿಯುತವಾಗಿ ಅಭಿವ್ಯಕ್ತಿಗೊಳಿಸಿದ್ದಾನೆ.

ಆಯುಸ್ಸು ತುಂಬಿದ ಯಾರನ್ನೂ ಯಮನು ಬಿಡುವುದಿಲ್ಲ. ಗರ್ಭದಲ್ಲಿರುವವರನ್ನಾಗಲೀ, ಬಾಲಕನೆಂದಾಗಲೀ, ಯಾರಿಗೂ ರಿಯಾಯತಿ ತೋರಿಸದೆ ಎಳೆದೊಯ್ಯುತ್ತಾನೆ. ಕಾಡಿನಲ್ಲಿ ಸಿಂಹವು ಹರಿಣದ ಮರಿಯನ್ನು ಹಿಡಿದು ನುಂಗುವ ವೇಳೆಯಲ್ಲಿ ಬಿಡಿಸುವವರಿಲ್ಲ ಎಂದು ಹೇಳಿದ ಕವಿ ಯಮನೆಂಬ ಪಾತಕನ ನಡತೆಯನ್ನು ಹೀಗೆ ವಿಶ್ಲೇಷಿಸಿದ್ದಾನೆ.

ಬಾಲಕನೆಂದು ಕೃಪೆಯ ಮಾಡಿ ಬಿಡನವ
ಮೇಲೆನಿಸುವ ಹಿರಿಯರನು

ಪಾಲಿಸಬೇಕೆಂಬವನಲ್ಲ ಮನದಲ್ಲಿ
ಕಾಲನೆಂಬ ಪಾತಕನು (೧೨)

ಇಷ್ಟು ಮಾತ್ರವಲ್ಲ, ಆ ಯಮನು ದೇಶಾಧಿಪತಿ, ಭಿಕಾರಿ, ತ್ಯಾಗಿ, ಭೋಗಿ–ಇವರಿಗಾದರೂ ಕನಿಕರ ತೋರಿಸುವುದಿಲ್ಲ. ಆವನ ಹಿಡಿತಕ್ಕೆ ಸಿಕ್ಕಮೇಲೆ ಗಜ, ಅಶ್ವ, ರಥ, ಕಾಲಾಳು, ಮಂತ್ರ, ಔಷಧ, ಗಿರಿದುರ್ಗ ಯಾವುವೂ ರಕ್ಷಣೆ ನೀಡಲಾರವು. ಹೀಗೆ ಚಿಂತಿಸುವುದೇ ಅಶರಣಾನುಪ್ರೇಕ್ಷೆಯೆನಿಸಿಕೊಳ್ಳುತ್ತದೆ.

ಮೂರನೆಯದು ಏಕತ್ವಾನುಪ್ರೇಕ್ಷೆ. ಶಂಭವ ತೀರ್ಥಂಕರನ ಸ್ತುತಿ ಈ ಏಕತ್ವಾನುಪ್ರೇಕ್ಷೆಯ ಪರಿಚ್ಛೇದದ ಆದಿಯಲ್ಲಿ ಇದೆ. ಜೀವಕ್ಕೆ ಹಗೆಯೂ ತಾನೇ, ಮಿತ್ರನೂ ತಾನೇ ಎಂಬುದನ್ನು ಈ ಅನುಪ್ರೇಕ್ಷೆ ತಿಳಿಸಿ ಕೊಡುವುದು.

ಪುಣ್ಯ–ಪಾಪಗಳನ್ನು ಸಂಪಾದಿಸುವುದು, ಅವುಗಳ ಫಲವನ್ನು ಉಣುವುದು ಈ ಎರಡಕ್ಕೂ ಜೀವ ತಾನೇ ಕಾರಣ. ಹಿಂದಿನ ದುಃಖ ಈ ಭವದ ದುಃಖ ಇವೆಲ್ಲಾ ನಾನು ಮಾಡಿದ ಕರ್ಮದ ಫಲ, ದುಃಖ, ದಾರಿದ್ರ್ಯ, ರೋಗ–ಇವು ಪಾಪದ ಫಲ ಎಂದು ಜೀವವು ತಿಳಿದುಕೊಳ್ಳಬೇಕು. ದುಃಕರ್ಮಫಲವಾದ ದುಃಖ ದಾರಿದ್ರ್ಯಗಳ ಉಪಭೋಗದಂತೆಯೇ ಸುಕರ್ಮ ಫಲದಿಂದ ಪಡೆದ ದೇವಗತಿಯ ಭೋಗ ಅನುಭೋಗಕ್ಕೂ ಜೀವ ತಾನೊಂದೇ ಕಾರಣವಾಗುತ್ತದೆ. ನಿನಗೆ ಬೇಕು ಎನಿಸಿದ ವಸ್ತುಗಳು ನೀನು ಬಯಸಿದಾಗ (ಮರಣ ಹೊಂದುವಾಗ) ನಿನ್ನ ಒಡನೆ ಬಾರ ವಾದ್ದರಿಂದ ನೀನು ಒಬ್ಬನೇ ಎಂಬುದನ್ನು ತಿಳಿಯಬೇಕು. ನಿನ್ನ ಪ್ರೀತಿ ಪಾತ್ರರು ನೀನು ಗಳಿಸಿದ ಹಣವನ್ನು ತಿಂದು ಬಾಳಿದರೂ ನಿನ್ನನ್ನು ಯಮನು ಒಯ್ಯುವಾಗ ದೂರ ಸಾರುವರು. ಆದ್ದರಿಂದ ಸುಖ ದುಃಖ ಎಲ್ಲದರ ಫಲಾಫಲಗಳಿಗೂ ನಾನೊಬ್ಬನೇ ಕಾರಣ

ಎಂಬುದನ್ನು ಜೀವವು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು– ಜಿನ ಧರ್ಮವೊಂದನ್ನು ದೃಢವಾಗಿ ಓಡಿಯಬೇಕು. ಚತುರ್ಗತಿಗಳ ಭ್ರಮಣ, ಜನನ, ಮರಣ, ದುಃಖ–ಈ ಕ್ಲೇಶಗಳ ಅನುಭೋಗ–ಇವುಗಳಿಗೆ ಜೀವ ತಾನೇ ಕಾರಣೀಭೂತನೆಂದು ತಿಳಿಯುವುದು ಈ ಅನುಪ್ರೇಕ್ಷೆಯ ಅರ್ಥ.

ಈ ಅನುಪ್ರೇಕ್ಷೆಯ ಉತ್ತರಾರ್ಧದಂತಿದೆ, ನಾಲ್ಕನೆಯದಾದ ಅನ್ಯತ್ವಾನುಪ್ರೇಕ್ಷೆ. ಒಟ್ಟಾರೆಯಾಗಿ 'ವೀತರಾಗನೆ ದೇವ ಭೂತಹಿತವೆ ಧರ್ಮ, ಜಾತರೂಪನೆ ಗುರು' ಎಂಬುದನ್ನು ಹೇಳ ಹೊರಟಿರುವ ವಿಜಯಣ್ಣ ಒಂದೊಂದು ಅನುಪ್ರೇಕ್ಷೆಯ ವಿವರದಲ್ಲೂ ಉಚಿತವಾಗಿ ಹೋಲಿಕೆಗಳನ್ನು ಪ್ರಯೋಗಿಸುತ್ತಾನೆ.

ಈ ಅನುಪ್ರೇಕ್ಷೆಯಲ್ಲಿ 'ಅನ್ಯವಸ್ತುಗಳನ್ನು ನಿನ್ನವೆಂದು ಭ್ರಮಿಸಬೇಡ. ಧನ, ಧಾನ್ಯ, ಪುತ್ರ, ಕಳತ್ರ–ಇವು ನಿನ್ನಿಂದ ಬೇರೆ. ಯಾವ ಕಾಲಕ್ಕಾದರೂ ನಾಶವಾಗಬಹುದು. ಕವಿ ಜೀವಕ್ಕೆ "ಬಿಸಿಲು ಕುದುರೆಗಳ ನೀರೆಂದು ಪರಿತಪ್ಪ ಪಶು ಜಾತಿಯವೊಲು ವಶವಲ್ಲದ ವಸ್ತುಗಳನ್ನು ನಿನಗೆಂದು ಹಸಗೆಡದಿರು, ಧನ ನಿನಗೆಂಬಡೆ ಸ್ಥಿರವಿಲ್ಲ" ಎಂದು ಬೋಧಿಸುತ್ತಾನೆ ಧನಕ್ಕೆ ಒದಗುವ ಕಳ್ಳ, ದಾಯಾದಿ ಮೊದಲಾದವರಿಂದ ಮನಸ್ಸಿಗೆ ದುಃಖವುಂಟಾಗುವುದು. ಧನವು ಪಾಪವಿಲ್ಲದೆ ಬರುವುದಿಲ್ಲ, ಅದು ಇದ್ದಾಗಲೂ ಕ್ಲೇಶವುಂಟು. ಧನದಿಂದ ಪುತ್ರ, ಮಿತ್ರರು ಹಗೆಗಳಾಗುವರು. ಆದ್ದರಿಂದ ಅದರ ಮೋಹಕ್ಕೆ ಸಿಲುಕಬೇಡ ಎಂದು ಕವಿ ಜೀವಕ್ಕೆ ಉಪದೇಶಿಸುತ್ತಾನೆ. ಈ ಅನುಪ್ರೇಕ್ಷೆಯ ಒಂದೆರಡು ಪದ್ಯಗಳು ಹೀಗಿವೆ :

ಕರ್ಮವುಳ್ಳ ಮಾನವರಂಜಿ ಮನದಲ್ಲಿ
ಧರ್ಮವ ಕೈಕೊಳ್ಳದಿರಲು

ನಿರ್ಮಲಪುಷ್ಪೌಷಧಿಯನ್ನು ವ್ಯಾಧಿತ
ದುರ್ಮನದಿಂ ಕೊಳ್ಳದಂತೆ (೧೨)

ಭಿನ್ನವಸ್ತುಗಳಿಂದಜೀಯನೆ ಮತಿಗೆಟ್ಟು
ತನ್ನವವೆಂದು ಮೋಹಿಸಲು
ಉನ್ನತಡುರಿಮಾಲೆಯ ಕಂಡು ಭರದಿಂದ
ಉನ್ಮದಿ ಬಿದ್ದು ಸಾವಂತೆ (೧೪)

ಧರ್ಮ, ಕರ್ಮ–ಇವುಗಳು ಯಾವ ಬಗೆಯವು ಎಂಬುದನ್ನು ಸರಿಯಾಗಿ ತಿಳಿಯಬೇಕು. ಧರ್ಮಮಾರ್ಗವನ್ನು ಕೈಗೊಳ್ಳದಿದ್ದರೆ ಕಾಯಿಲೆಯಾಗಿರುವವನು ಔಷಧಿಯನ್ನು ಸ್ವೀಕರಿಸದ ಮೂಢನಂತಾಗುತ್ತಾನೆ. ಅಂತೆಯೇ ತನ್ನದಲ್ಲದ ವಸ್ತುಗಳನ್ನು ತನ್ನದು ಎಂದು ಭಾವಿಸಿದರೆ 'ಉರಿಯಲ್ಲಿ ಬಿದ್ದು ಸಾಯುವಂತಹ' ಅಜ್ಞಾನಿಯಾಗುತ್ತಾನೆ.

ಮುಂದೆ ಸ್ತ್ರೀವ್ಯಾಮೋಹದ ಬಗ್ಗೆ ವಿವರಣೆ ಬರುತ್ತದೆ. ಇದೂ ಜೀವವೊಂದಕ್ಕೆ ಉಪದೇಶ ಮಾಡುವ ರೀತಿಯಲ್ಲೇ ಇದೆ. "ಸ್ತ್ರೀಯ ಮೋಹವು ಸರಿಯಲ್ಲ. ಆದರಿಂದ ದೇವದಾನವರೆಲ್ಲ ಪಾಪದ ಬಲೆಯಲ್ಲಿ ಬಿದ್ದರು ಎಂಬುದನ್ನು ನೀನು ತಿಳಿಯೆಯಾ? ಶಶಿಮುಖಿಯರ ದೃಷ್ಟಿ ವಿಷಪೂರಿತವಾದುದು. ಭವಸಾಗರ–ಮಧ್ಯಕ್ಕೆ ವಶ ಮಾಡುವುದು." ಆ ಮೋಹಕ್ಕೆ ವಶವಾಗಬೇಡ ಜೀವವೇ ಎಂದು ಆತ್ಮೀಯವಾದ ತಿಳುವಳಿಕೆ ಹೇಳುವಂತೆ ಇಲ್ಲಿನ ನಿರೂಪಣೆ ಇದೆ.

ನಿನ್ನ ಶರೀರವು ನಿನ್ನೊಡನೆ ಬಾರದು, ನಿನ್ನ ನೆಚ್ಚಿನ ಪುತ್ರ, ಮಿತ್ರ–ಎಲ್ಲರೂ ನಿನ್ನಿಂದ ಬೇರೆ ಎಲೇ ಜೀವವೇ, ಅನ್ಯರ ಆಯುಸ್ಸು ತೀರಿಹೋಗಲು ಅವರು ನಿನ್ನವರು ಎಂದು ಅಳಬೇಡ. ಅವರನ್ನು

ನಿನ್ನಿಂದ ಬೇರೆ ಎಂದು ಎಣಿಸು. ಸಂಸಾರ ಶರಧಿಯನ್ನು ಹೇಗೆ ದಾಟುವುದು ಎಂದು ನಿನ್ನ ಜೀವಕ್ಕಾಗಿ ಪರಿತಪಿಸು, ಅಳು ಎಂದು ಕವಿ ಹೇಳುತ್ತಾನೆ. ಜೀವವು ಯಾವುದನ್ನೂ ಹತ್ತಿಸಿಕೊಳ್ಳದೆ ನೀರಿನಲ್ಲಿನ ಕಮಲಪತ್ರದಂತೆ ಬಾಳಬೇಕಾದ ಬಗೆಯ ವರ್ಣನೆ ಇಲ್ಲಿ ಬರುತ್ತದೆ. ಇಡಿಯಾಗಿ ಈ ದೇಹ ನನ್ನದಲ್ಲ. ಪ್ರಾಪ್ತಿ ನಿಮಿತ್ತವಷ್ಟೇ. ಪುತ್ರ ಮಿತ್ರರು ನನ್ನವರಲ್ಲ. ಧನ ಧಾನ್ಯ ಸೌಭಾಗ್ಯ ಇವಾವುವೂ ನನ್ನವಲ್ಲ, ಎಂದು ಚಿಂತಿಸುವುದು ಈ ಅನುಪ್ರೇಕ್ಷೆಯ ಮುಖ್ಯಾರ್ಥ.

ಐದನೆಯದು ಸಂಸಾರಾನುಪ್ರೇಕ್ಷೆ. ಜೀವಕ್ಕೆ ತಿರ್ಯಕ್, ನಾರಕ, ನರ, ಸುರ–ಇವು ನಾಲ್ಕು ಗತಿಗಳಿವೆ. ಸಂಸಾರ ಪಾಶಕ್ಕೆ ಸಿಕ್ಕ ಜೀವ ಧರ್ಮವನ್ನು ನಿಂದಿಸಿ, ಇಂದ್ರಿಯದ ಇಚ್ಛೆಯ ಫಲವಾಗಿ ಆನೆ, ನರಿ ಮೊದಲಾದ ಜನ್ಮಗಳಲ್ಲಿ ತೊಳಲಬೇಕಾಗುವುದು. ಕರ್ಮವಶದಿಂದ ಭೂಪತಿಯಾಗಿದ್ದ ಜೀವವು ಆನೆಯಾಗಿ ಆನೆಯ ಜೀವ ಭೂಪತಿಯಾಗಿ ಜನ್ಮ ತಳೆಯುತ್ತದೆ. ಕರ್ಮವಶದಿಂದಾಗಿಯೇ ತಂದೆಯಾಗಿದ್ದವನು ಮಗನಾಗಿಯೋ, ಮಗನಾದವನು ತಂದೆಯಾಗಿಯೋ ಜನ್ಮ ತಳೆಯುವನು. ಹೀಗೆ ಸಂಸಾರ ಸ್ಥಿತಿಯನ್ನು ಚಿಂತಿಸಬೇಕು. ಸತ್ಯ ಧರ್ಮಗಳನ್ನು ಬಿಟ್ಟು ಹಣವನ್ನು ಸಂಗ್ರಹಿಸುವುದು, ಜಿನಧರ್ಮವನ್ನು ಜರೆದು ಕುತ್ಸಿತವಾದ ಧರ್ಮಗಳನ್ನು ಪೂಜಿಸುವುದು, ಮದ್ಯ, ಮಾಂಸ ಮುಂತಾದುವನ್ನು ಸೇವಿಸುವುದು, ಜೀವವಧೆಗೈಯ್ಯುವುದು, ಪರಸ್ತ್ರೀಯರನ್ನು ಮೋಹಿಸುವುದು—ಇವೇ ಮೊದಲಾದವುಗಳಿಂದ ಜೀವನಿಗೆ ಸಂಸಾರದ ತೊಳಲಾಟ ಪ್ರಾಪ್ತವಾಗುವುದು. ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ–ಎಂಬ ಪಂಚ ಸಂಸಾರಗಳಲ್ಲಿ ತೊಳಲಿ ಬರುತ್ತ ಒಮ್ಮೆ ಮಾನವ ಜನ್ಮದಲ್ಲಿ ಹುಟ್ಟಿದಾಗ

ಸಂಸಾರ ಸ್ಥಿತಿಯನ್ನು ತಿಳಿದು ನಡೆಯದಿದ್ದರೆ "ಹುಟ್ಟು ಕುರುಡ ಕಾಡಿನಲ್ಲಿ ಸಿಕ್ಕಿದಂತೆ" ಆಗುತ್ತಾನೆ. ಆದ್ದರಿಂದ ಸದ್ಧರ್ಮದಲ್ಲಿ ಸದಾ ನಿರತನಾಗಿರಬೇಕು ಎಂದು ಈ ಅನುಪ್ರೇಕ್ಷೆ ತಿಳಿಸುತ್ತದೆ.

ಆರನೆಯ ಚಿಂತನೆ ಲೋಕಾನುಪ್ರೇಕ್ಷೆ. ಇದುವರೆಗೆ ನಾವು ನೋಡಿದ ಅನುಪ್ರೇಕ್ಷೆಗಳಲ್ಲಿ ಇದು ದೊಡ್ಡದು. ಚತುರ್ಗತಿಗಳ ನೆಲೆಗಳು, ಲೋಕಾಕಾರ ಕಥನ, ಜೀವನಿವಹ—ಇವನ್ನು ಕುರಿತು ಚಿಂತನೆ ಮಾಡುವುದು ಲೋಕಾನುಪ್ರೇಕ್ಷೆ ಎನಿಸಿಕೊಳ್ಳುತ್ತದೆ. ಇದನ್ನು ಸ್ವಲ್ಪ ವಿವರವಾಗಿ ನೋಡೋಣ.

ಮೊದಲಿಗೆ ಕವಿ ನರಕಲೋಕವನ್ನು ಆ ಬಳಿಕ ನಾರಕರಿಗೆ ದೊರೆಯುವ ಹಿಂಸೆಗಳನ್ನು ಅವನ್ನು ಅನುಭವಿಸುವಾಗ ಜೀವವು ಪಡುವ ಪಶ್ಚಾತ್ತಾಪ (ಆತ್ಮನಿಂದನ, ಹಿಂದಿನ ಕೃತ್ಯಗಳ ಸ್ಮರಣ) ವನ್ನು ವಿವರಿಸುತ್ತಾನೆ. ಈ ಸಂದರ್ಭದ ಒಂದೆರಡು ಪದ್ಯಗಳನ್ನು ನೋಡಬಹುದು.

ಪೆಂಡಿರು ಮಕ್ಕಳು ಮಿತ್ರಜನಂಗಳು
ಚಂಡಪಾಪ ಪ್ರೇರಕರು
ಕಂಡ ಕಡೆಗೆ ಹೋದರು ನಾನೊಬ್ಬನೆ
ದಂಡಣೆಗೊಳಗಾದೆನಿಲ್ಲಿ (೪೯)

ಫಲವಾದ ಮರಕೆ ಪಲವು ಪಕ್ಷಿ ನೆರೆದಲ್ಲಿ
ಫಲವ ಭುಂಜಿಸಿ ಫಲ ತೀರೆ
ಪಲವು ಕಡೆಗೆ ಪೋಪಂದದಿ ಬಳಗವು
ಸಲೆ ನೋಡಲು ನನಗೀಗ (೫೦)

ನರಕಲೋಕದ ವರ್ಣನೆಯನ್ನು ನಾವು ಹಲವು ಕಾವ್ಯಗಳಲ್ಲಿ ಕಾಣುತ್ತೇವೆ. ಆ ಲೋಕದಲ್ಲಿ ನಡೆಯುವ ಕ್ರೂರಕೃತ್ಯಗಳನ್ನು ಬಣ್ಣಿಸುವ ವಿಜಯಣ್ಣನ ಪದ್ಯವೊಂದು ಹೀಗಿದೆ:

ಪರಸತಿಯನು ನೋಡಿ ಮನದಲಿ ರಾಗಿಸಿ
ಇರದೆ ನೆರೆವೆನೆಂಬವನ
ಉರಿವ ಲೋಹದ ಪುತ್ಥಳಿಕೆಯ ನರಕದಿ
ಪಿರಿದಾಗಿ ತರ್ಕೈಸುವರು (೬೭)

ಶ್ರಾವಕ ವ್ರತಗಳನ್ನು ಸಮ್ಯಕ್ತ್ವವನ್ನು ಕೈಗೊಂಡು ವಿಷಯ ಪರವಶದಿಂದಾಗಿ ಅವನ್ನು ಕೈಬಿಟ್ಟರೆ ಅದರಿಂದ ಒದಗುವ ದುಃಖಗಳಾವುವೆಂಬುದನ್ನು ಕವಿ ವರ್ಣಿಸುತ್ತಾನೆ. ಅನಂತರ ತಿರ್ಯಕ್ ಜೀವಿಯ ದುಃಖವನ್ನು ತಿಳಿಸುತ್ತಾನೆ. ಆ ಬಳಿಕ ಮಧ್ಯಮ ಲೋಕವನ್ನೂ, ಆ ಲೋಕದ ಜೀವಿಗಳ ದುಸ್ಥಿತಿಗಳನ್ನೂ ಚಿತ್ರಿಸಿದ್ದಾನೆ. ಅದಾದ ಬಳಿಕ ಮಾನವಗತಿ, ಭವನಗತಿ, ವ್ಯಂತರಗತಿ, ಜ್ಯೋತಿಷ್ಕಗತಿ,–ಕಲ್ಪಗತಿ–ಈ ಐದು ಗತಿಗಳ ವಿವರ ಬರುತ್ತದೆ. ಇದಕ್ಕೆ ಮುಂದೆ ದೇವ, ಜೋತಿಷ್ಕ, ರವಿ, ಚಂದ್ರ ಮೊದಲಾದವರ ಆಯುಷ್ಯದ ವಿವರಣೆಯಿದೆ. ಕೊನೆಗೆ ಕಲ್ಪವಾಸಿಗಳಾದ ಸುರರ ವೈಭವದ ದೀರ್ಘವಾದ ವರ್ಣನೆ ಬರುವುದು. ಸು. ೧೩೦ ಪದ್ಯಗಳಲ್ಲಿ ಇದು ವ್ಯಾಪಿತವಾಗಿದೆ. ನರ, ತಿರ್ಯಕ್–ಈ ಜನ್ಮಗಳು ದುಃಖ ಮತ್ತು ಪಾಪ–ಇವುಗಳ ಫಲವೆಂದೂ, ಪುಣ್ಯಫಲದಿಂದ ಸುರಲೋಕ ಪ್ರಾಪ್ತಿ ಮತ್ತು ಸುಖಪ್ರಾಪ್ತಿ ತಪ್ಪುವುದಿಲ್ಲವೆಂದೂ ಜೀವವು ಚಿಂತಿಸಲಿ ಎನ್ನುತ್ತ ಕವಿ ಈ ಅನುಪ್ರೇಕ್ಷೆಗೆ ಮಂಗಳ ಹಾಡಿದ್ದಾನೆ. ಏಳನೆಯದು ಅಶುಚಿತ್ವಾನುಪ್ರೇಕ್ಷೆ.

ರಕ್ತ, ಎಲುಬು, ತೊಗಲು, ಮಾಂಸ–ಇವುಗಳಿಂದ ಆಗಿರುವ ಈ ಶರೀರ–ವಾತ, ಪಿತ್ತ, ಮಲ, ಮೂತ್ರ ಮೊದಲಾದ ಹಲವು ಅಶುದ್ಧಿಗಳಿಗೆ ತುತ್ತಾಗುತ್ತದೆ. ಇಂತಹ ಅಶುದ್ಧಿ ಶರೀರಕ್ಕೆ ಕಾರಣವನ್ನು ಭಾವಿಸಿ, ದೇಹದ ಮೇಲೆ ವ್ಯಾಮೋಹವನ್ನು ಇಟ್ಟುಕೊಳ್ಳದೆ ಸಮ್ಯಕ್ ದರ್ಶನಾದಿಗಳೇ ಜೀವದ ಶುದ್ಧಿಗೆ

ಕಾರಣವೆಂದು ಭಾವಿಸುವುದೇ ಅಶುಚಿತ್ವಾನುಪ್ರೇಕ್ಷೆ ಎನಿಸಿಕೊಳ್ಳುತ್ತದೆ. ಇದನ್ನು ವಿಜಯಣ್ಣನ ವರ್ಣನೆಯಂತೆಯೇ ನೋಡಿಕೊಂಡು ಹೋಗೋಣ.

ಜೀವವೇ, ನಿನ್ನ ದೇಹವೆಂಬ ಗೃಹದಲ್ಲಿ ಯಾವ ಯಾವ ವಸ್ತುಗಳಿವೆ ಎಂಬುದನ್ನು ಹೇಳುತ್ತೇನೆ, ಕೇಳು. ಇದು ಎಂದರೆ ದೇಹವು ಎಲುಬಿನ ಗಂಬ, ಮಾಂಸದ ನೆಲೆ, ನರಗಳ ಕಟ್ಟು, ತೊಗಲಿನ ಹೊದಿಕೆ. ಯಾವಾಗಲೂ ತುಂಬಿ ಸುರಿಯುವ ದುರ್ಗಂಧ, ಸಿಂಬಳ, ಉಗುಳು ಮೊದಲಾದವುಗಳಿಗೆ ಆಗರವಾಗಿರುವ ಈ ಜೀವವನ್ನು ನೀನು ಮೋಹಿಸಬೇಡ. ಹುಳಿದ ಕಬ್ಬು ತಿನ್ನಲು ಒಳ್ಳೆಯದೇ? ಯೌವನವು ಹೋಗಿ ಮುಪ್ಪು ಆವರಿಸಿದಾಗ ನಿನ್ನ ತಂದೆ, ತಾಯಿ, ಸೋದರ, ಹೆಂಡತಿ, ಮಕ್ಕಳು ಎಲ್ಲರೂ ನಿನ್ನನ್ನು ಕಂಡು ಹೇಸಿಗೆ ಪಡುವರು. "ಕಿಚ್ಚಿನೊಡನೆ ನೀರು ಕುದಿಯುವಂತೆ" ನಿನ್ನ ದೇಹವನ್ನು ನೆಚ್ಚಿ ಬಹು ದುಃಖಕ್ಕೆ ಒಳಗಾದೆ. ಹೇಗೆಂದರೆ "ಹಱಿದಿರ್ದ ಹಱುಗೋಲ ನಱಿದೇಱಿ ಮುಳುಗುವ ಕರ ಮರುಳನ ತೆಱನಂತೆ." ಮೊದಲೇ ಹರಿದು ಹೋದ ಹರುಗೋಲು ಇದನ್ನು ತಿಳಿದೂ, ತಿಳಿದೂ ಅದನ್ನೇ ಏರಿ ಹೋದರೆ ಮುಳುಗಿ ಹೋಗುವುದರಲ್ಲಿ ಸಂಶಯವಿಲ್ಲ. ಅಂತಹ ಹೆಡ್ಡತನವನ್ನು ಮಾಡುವ ಮೂರ್ಖನಂತೆ ನಶ್ವರವಾದ ಶರೀರವನ್ನು ಏಕೆ ಆಶಿಸುತ್ತೀಯೆ? ಎಂದು ಕವಿ ಮನಕ್ಕೆ ತಾಗುವಂತೆ ಬೋಧಿಸುತ್ತಾನೆ.

ಮುಡಿದ ಹೂವನ್ನು ಬಾಡಿದ ಮೇಲೆ ಬಿಸಾಡುವರೇ ಹೊರತು ಅದನ್ನು ಹಿಡಿಯುವುದಿಲ್ಲ. ಒಮ್ಮೆ ಉಟ್ಟ ವಸ್ತ್ರವನ್ನು ಮೈಲಿಗೆಯೆಂದು ಜನರು ಶುದ್ಧ ಮಾಡದೆ ಅದನ್ನು ಮತ್ತೆ ತೊಡುವುದಿಲ್ಲ. ಊಟ ಮಾಡಿದ ತಟ್ಟೆಯನ್ನು ಎಂಜಲೆಂದು ಯಾರೂ ಮುಟ್ಟು

ವುದಿಲ್ಲ. ಸ್ನಾನ ಮಾಡಿದ ನೀರಿನ ಮೇಲೆ ಯಾರೂ ಕಾಲಿಡು ವುದಿಲ್ಲ. ತಮ್ಮದೇ ಶರೀರದ್ದಾದರೂ ಉಗುಳು, ಕೀವು, ನೆತ್ತರು ಶ್ಲೇಷ್ಮ, ಪಿತ್ತಗಳನ್ನು ಕಂಡು ಹೇಸಿಗೆ ಪಡುವರು. ನೀನು ಸತ್ತ ಕೂಡಲೇ ಶವವನ್ನು ಸುಡುವರು. ಸಾಗರದಷ್ಟು ನೀರಿನಿಂದ ತೊಳೆದರೂ ದೇಹದ ದುರ್ಗಂಧ ಹೋಗುವುದಿಲ್ಲ. ಆ ಕಾರಣ ವ್ರತ ಗುಣಗಳನ್ನು ಧರಿಸಿ ಶರೀರವನ್ನು ದಂಡಿಸಿದರೆ ಅತಿಶಯ ವಾದ ಸುಖವು ಪ್ರಾಪ್ತವಾಗುವುದು.

ಇದು ಈ ಅನುಪ್ರೇಕ್ಷೆಯ ಸಾರಾಂಶ. ಇದರ ನಿರೂಪಣೆ ಯನ್ನು ಕವಿ ತರ್ಕಬದ್ಧವಾಗಿ ಮಾಡಿದ್ದಾನೆ.

ಎಂಟನೆಯದು ಆಸ್ರವಾನುಪ್ರೇಕ್ಷೆ. ಆಸ್ರವ ಎಂದರೆ ಬಂಧನ. ಪುಣ್ಯ, ಪಾಪ, ಕರ್ಮಗಳು ಜೀವಕ್ಕೆ ಬಂಧನವನ್ನು ಉಂಟು ಮಾಡುತ್ತವೆ. ತನು, ಮನ, ವಚನಗಳಿಂದ ಶುಭಾಶುಭಕರ್ಮ ಗಳು ಬರುವುವು. ತೂತುಗಳಾಗಿದ್ದ ಹಡಗು ನೀರಿನಲ್ಲಿ ಚಲಿಸಲು ಸಾಧ್ಯವಿಲ್ಲ. ಮುಳುಗುವುದೇ ಅದಕ್ಕೆ ಒದಗುವ ಗತಿ. ಅಂತೆಯೇ ಮಿಥ್ಯಾತ್ವ, ಅವ್ರತಯೋಗ, ಕಷಾಯ–ಇವುಗಳಿಂದ ಅಶುಭ ದಾಸ್ರವ ಬರುವುದು. ಉಪಶಮವ್ರತ, ಧರ್ಮಚಿಂತನೆ–ಇವೇ ಮೊದಲಾದವುಗಳಿಂದ ಶುಭದಾಸ್ರವ ಬರುತ್ತದೆ. ಕೊಲೆ, ಹುಸಿ, ಕಳವು ಮುಂತಾದ ಏಳು ವ್ಯಸನಗಳಿಂದ ಕ್ರೋಧ, ಲೋಭ ಮುಂತಾದ ಅಶುಭ ಲೇಶ್ಯಗಳು ಬರುವುವು. ದೇವ, ಶಾಸ್ತ್ರಗಳಲ್ಲಿ, ಗುರುವಿನಲ್ಲಿ ಮಾತ್ಸರ್ಯ, ಉದಾಸೀನ, ಕ್ರೋಧ–ಇವುಗಳಿಂದ ಕರ್ಮಾಸ್ರವ ಉಂಟಾಗುವುದು.

"ಸೂರ್ಯ ಚಂದ್ರರ ಮೇಲೆ ಮೇಘ ಮುಸುಕಿದಂತೆ", "ನೀರ ಹಾವಸೆ ಕವಿದಂತೆ" ಜೀವವನ್ನು ಸುಜ್ಞಾನವು ಮರೆಸಿಕೊಂಡಿರು ವುದು. ಆಸ್ರವ ಕರ್ಮದಿಂದ ವ್ಯಾಪಿತನಾದ ಜೀವಿಯು "ಕಾಡನ್ನು

ಹೊಕ್ಕ ಹುಟ್ಟುಗುರುಡನಂತೆ" ದಿಕ್ಕು ತೋಚದೆ ಅತ್ಯಂತ ದುಃಖವನ್ನು ಪಡೆದಿರುವನು. ಇದರಿಂದ ದರ್ಶನಾವರಣೀಯುದಾಸ್ರವ, ಅಸಾತ ವೇದನೀಯುದಾಸ್ರವ ಸಾತವೇದನೀಯುದಾಸ್ರವ ದರ್ಶನಮೋಹನೀಯದಾಸ್ರವ, ಚಾರಿತ್ರಮೋಹನೀಯುದಾಸ್ರವ, ಚತುರ್ವಿಧಾಯುಷ್ಯದಾಸ್ರವ, ನಾಮಕರ್ಮದಾಸ್ರವ, ಉಚ್ಚ ಗೋತ್ರದಾಸ್ರವ-ಇವೇ ಮೊದಲಾದ ಆಸ್ರವಗಳನ್ನು ನೆನೆದು, ಅವುಗಳಿಂದ ಕೆಟ್ಟು ಹೋದವರ ಕಥೆಗಳನ್ನು ತಿಳಿದು, ಉತ್ತಮ ಕ್ಷಮಾದಿ ಧರ್ಮವೇ ಒಳ್ಳೆತೆಂದು ಆಲೋಚಿಸಬೇಕೆನ್ನುವುದು ಈ ಅನುಪ್ರೇಕ್ಷೆಯ ತತ್ತ್ವ.

ಇದರಲ್ಲಿ ವ್ಯಾಮೋಹ, ಚಕ್ಷುಸುಖ, ಶ್ರವಣಸುಖ, ವೈರ-ಇವುಗಳೊಂದೊಂದರಿಂದ ಕೆಟ್ಟವರ ಕಥೆಗಳನ್ನು ವಿಜಯಣ್ಣ ಉದ್ಧರಿಸಿದ್ದಾನೆ. ಒಂದೊಂದು ಇಂದ್ರಿಯದ ಸುಖವನ್ನು ಆಶಿಸಿಯೇ ಹಲವಾರು ದುಃಖಗಳಿಗೆ ಒಳಗಾಗುವ ಮಾನವ ಐದು ಇಂದ್ರಿಯಗಳ ಸುಖವನ್ನೂ ಬಯಸಿದರೆ ಇನ್ನೆಷ್ಟು ಭವಗಳ ದುಃಖವನ್ನು ಉಣ್ಣಬೇಕಾದೀತು ಎಂಬುದರ ಕಲ್ಪನೆ ಮಾಡಿ ಕೊಡುವುದು ಕವಿಯ ಉದ್ದೇಶ. ಪರಸ್ತ್ರೀವ್ಯಾಮೋಹದಿಂದ ರಾವಣ ಕೆಟ್ಟು ನರಕಕ್ಕೆ ಹೋದರೆ ಪರಪುರುಷ ವ್ಯಾಮೋಹದಿಂದ ಅಮೃತಮತಿ ಆ ಗತಿಯನ್ನು ಪಡೆಯುತ್ತಾಳೆ.

ಇದರಿಂದ ಇಂದ್ರಿಯ ಪರವಾಗಿ ದೊರೆಯುವ ಸುಖವನ್ನು ಆಶಿಸಬಾರದು ಎಂದು ನಾವು ತಿಳಿಯಬೇಕು. ಈ ಅನುಪ್ರೇಕ್ಷೆಯಲ್ಲಿ ನಿರೂಪಿತವಾದಂತೆ ನಾವು ಮುಕ್ತಿಯನ್ನು ಪಡೆಯ ಬೇಕಾದರೆ ಶುಭದ ಕರ್ಮಗಳನ್ನು ಮಾಡುವುದನ್ನು ತ್ಯಜಿಸಬೇಕು. ಇದು ಸ್ವಾರಸ್ಯವಾದ ವಿಷಯ. ಶುಭವಾಗಲೀ, ಅಶುಭವಾಗಲೀ ಯಾವುದೇ ಲೇಶ್ಯವಿಲ್ಲದೆ ನಿಸ್ಸಂಗವಾಗಿ, ನಿರ್ಮೋಹಿತನಾಗಿ,

ಯಾವ ಕರ್ಮವನ್ನೂ ಮಾಡದೆ ಇರುವವನೇ ಮುಕ್ತಿ ಹೊಂದ ತಕ್ಕವನು ಎಂಬುದು ಜೈನಧರ್ಮದ ನಿರೂಪಣೆ.

ಒಂಬತ್ತನೆಯದು ಸಂವರಾನುಪ್ರೇಕ್ಷೆ. ಇದನ್ನು ಕವಿ ಹೀಗೆ ವಿವರಿಸುತ್ತಾನೆ.

ಪರಿಣಾಮದ ಪೊಲ್ಲಮೆಯಿಂದ ಸಿಲ್ಲದೆ
ಬರುತಿಹ ಪಾಪಾಸ್ರವವ
ಬರಲೀಯದೆ ಸಮ್ಯಕ್ತ್ವಚಾರಿತ್ರವ
ಧರಿಯಿಸುವುದೆ ಸಂವರೆಯು (೮)

ಚಲಿಮಲಿನವ ಗಾಢತ್ವವ ತೊಲಗಿಸಿ
ಬಲು ಸಮ್ಯಕ್ತ್ವಪಡಿಗಳಿಂ
ಅಲಸದೆ ಮಿಥ್ಯಾತ್ವದಾಸ್ರವ ದ್ವಾರವ
ನಿಲಿಸುವುದದುವೆ ಸಂವರೆಯು (೯)

ಸಮ್ಯಕ್ತ್ವ ಚಾರಿತ್ರವನ್ನು ಧರಿಸುವುದೇ ಸಂವರೆ. ಮಿಥ್ಯಾತ್ವದ ಆಸ್ರವದ್ವಾರವನ್ನು ನಿಲ್ಲಿಸುವುದೇ ಸಂವರೆ.

ಪಿರಿದು ವ್ಯಾಧಿಯನುಳ್ಳ ಮಾನವರಿಗೆ ವೈದ್ಯ
ಕರುಣಿಸಿ ಪೇಳಲೌಷಧಿಯ
ಮರುಳುತನದೊಳೊಲ್ಲದೆ ಆ ರೋಗದಿ
ಹೊರಳುತಿರ್ಪ ಮರುಳಂತೆ (೧೦)

ದೊಡ್ಡರೋಗದಿಂದ ಬಳಲುತ್ತಿರುವವನಿಗೆ ವೈದ್ಯ ಔಷಧಿ ಹೇಳಿದರೆ ಅದನ್ನು ಕೈಕೊಳ್ಳದೆ ರೋಗದಲ್ಲೇ ನರಳುವವನು ಹುಚ್ಚ ಎಂದು ಕವಿ ಹೇಳುತ್ತಾನೆ. ವಿಷಯದ್ವಾರದಿಂದ ಬರುವ ಕರ್ಮ ಸಲಿಲದ ಆಸ್ರವವನ್ನು ನಿಜ ಸ್ವರೂಪದರ್ಶನ, ಲಕ್ಷಣ, ತಪ, ವ್ರತ,

ಧರ್ಮ, ಅನುಪ್ರೇಕ್ಷೆ–ಇವುಗಳಿಂದ ನಿರೋಧಿಸಿ, ನಿರ್ವಾಣ ಗುಣವನ್ನು ನಿರ್ವಿಘ್ನದಿಂದ ನಡೆಸುವ ಗುಣ ಚಿಂತನೆಯೇ ಸಂವರೆಯೆನಿಸುತ್ತದೆ.

ಹತ್ತನೆಯದು ನಿರ್ಜರಾನುಪ್ರೇಕ್ಷೆ. ತಪೋಗ್ನಿಯ ದೆಸೆಯಿಂದ ಜೀವನದ ಕರ್ಮ ನಿವಾರಣೆಯಾಗುತ್ತದೆ. ಕೆಲವರು ಕ್ಷಮೆಯಿಂದ ದುರ್ವಚನಗಳನ್ನೇ ಅಲ್ಲದೆ ಘೋರವಾದ ಉಪಸರ್ಗಗಳನ್ನೂ, ತಾಡನ–ಬಂಧನ–ಇವುಗಳನ್ನೂ ಸೈರಿಸುವರು. ಏನೇ ತೊಂದರೆಗಳು ಬಂದರೂ ಅವು ನಾವು ನೆರಹಿದ ದುಃಕರ್ಮವೆಂದು ಉಪಶಮ ಭಾವದಿಂದ ತಾಳುವ ಸತ್ಪುರುಷರಿಗೆ ದೊರೆಯುವ ಸಿದ್ಧಿಯೇ ನಿರ್ಜರೆ. ಕರ್ಮವನ್ನು ನಿವಾರಿಸಿಕೊಳ್ಳುವುದಕ್ಕೆ ನಿರ್ಜರೆ ಎಂಬ ಹೆಸರುಂಟು.

ಅನುಪ್ರೇಕ್ಷೆಗಳಲ್ಲೆಲ್ಲಾ ವಿಸ್ತಾರವಾದುದೆಂದರೆ ೭೪ ಪದ್ಯಗಳುಳ್ಳ ಹನ್ನೊಂದನೆಯದಾದ ಧರ್ಮಾನುಪ್ರೇಕ್ಷೆ. ಶಾಂತಿನಾಥ ತೀರ್ಥಂಕರನ ಸ್ತುತಿಯೊಂದಿಗೆ ಈ ಪರಿಚ್ಛೇದ ಪ್ರಾರಂಭವಾಗಿದೆ. ಆರಂಭಕ್ಕೇ ಕವಿ ಧರ್ಮಾಧರ್ಮಗಳು ಯಾವುವೆಂಬುದನ್ನು ವಿವರಿಸುತ್ತಾನೆ.

ನಿರ್ಮಲವಾದ ಸುಖಕ್ಕೆ ಕಾರಣವಾದುದೇ ಧರ್ಮ. ಕರ್ಮಬಂಧಕ್ಕೆ ಕಾರಣವಾಗುವ ಕೃತ್ಯವನ್ನು ಧರ್ಮವೆಂದರೆ ಸರಿಯಾಗುತ್ತದೆಯೇ? ಎಂದು ಪ್ರಶ್ನಿಸುತ್ತ, ಕವಿ, ಹಾಗೆ ಮಾಡುವವರು ವೃಥಾ ಕೆಡುವರೆಂದು ಹೀಗೆ ಸ್ಪಷ್ಟಪಡಿಸುತ್ತಾನೆ.

ಪಿತ್ತಾಳೆಯು ಹೇಮವರ್ಣವಾಗಿರ್ದಡೆ
ಉತ್ತಮ ಸ್ವರ್ಣವೆಂದದನು
ಅರ್ತಿಯಿಂದ ಧನವನು ಕೊಟ್ಟು ಕೊಂಡವೆ
ವ್ಯರ್ಥವಾಗಿ ಕೆಡುವಂತೆ (೪)

ಬೆಳ್ಳಿತಾಮ್ರಗಳೊಳಗಿಕ್ಕಿರ್ದ ಹೊನ್ನನು
ಒಳ್ಳಿಹವೆಂದು ಕಟ್ಟಿದಡೆ
ಒಳ್ಳಿತೇನಹವೆ ಕೊಂಡಾತಸವಾನಕಿ
ದಳ್ಳುರಿಯನು ಮಾಡದಿಹುದೆ (೫)

ಹಿತ್ತಾಳೆಯು ಚಿನ್ನದ ಬಣ್ಣದಲ್ಲಿದ್ದರೆ, ಅದನ್ನೇ ಚಿನ್ನವೆಂದು ಭ್ರಮಿಸಿ ಕೊಂಡರೆ ಹಾಗೆ ಕೊಂಡಾತ ಮೋಸ ಹೋಗುತ್ತಾನೆ. ಹಾಗೆಯೇ ಬೆಳ್ಳಿ ತಾಮ್ರಗಳ ಜೊತೆಯಲ್ಲಿ ಇರುವ ಚಿನ್ನ ಶುದ್ಧ ವಾದುದಲ್ಲ. ಅದನ್ನು ಒಂದುವೇಳೆ ಶುದ್ಧವಾದ ಹೊನ್ನು ಎಂದು ಭಾವಿಸಿಕೊಂಡರೆ ಆ ಬಳಿಕ ನಿಜಸಂಗತಿ ತಿಳಿದಾಗ ಅವನ ಮನಸ್ಸಿನಲ್ಲಿ (ದುಃಖದ) ಕಿಚ್ಚು ಮೂಡದಿರುವುದೇ? ಎಂದು ಕವಿ ಪ್ರಶ್ನಿಸುತ್ತಾನೆ. ಇದರಿಂದ ಧರ್ಮವನ್ನು, ಅಧರ್ಮವನ್ನು ಸ್ವತಃ ಪರೀಕ್ಷೆಯಿಂದ ದೃಢಪಡಿಸಿಕೊಳ್ಳಬೇಕೆಂಬುದನ್ನು ಮತ್ತೊಂದು ಪದ್ಯದಲ್ಲಿ ಹೀಗೆ ಸುವ್ಯಕ್ತಗೊಳಿಸಿದ್ದಾನೆ.

ಸ್ವರ್ಣವ ಕೊಂಬಾತನೊರೆದು ಕತ್ತರಿಸಿಯೆ
ಮನ್ನಿಸಿದದ ಮತ್ತೆ ಕಾಸಿ
ಉನ್ನತ ತಾಡನದಿಂದ ಪರೀಕ್ಷಿಸಿ
ಚೆನ್ನಾಗಿ ನೋಡಿಕೊಂಬಂತೆ (೬)

ಅಧರ್ಮವನ್ನೇ ಧರ್ಮವೆಂದು ಭಾವಿಸಿ, ಅದರ ಬೆನ್ನುಹತ್ತಿ ಹೋದವರು ''ತೂತಿನ ಹಡಗನ್ನು ಹತ್ತಿ ಸಮುದ್ರದಲ್ಲಿ ಮುಳುಗಿ ಸಾಯುವವರಂತೆ'' ಆಗುವರು.

ಹದಿನೆಂಟು ದೋಷರಹಿತನಾದ ಜಿನರಾಜನು ಹೇಳಿದ ದಯಾ ಮೂಲ ಧರ್ಮವೇ ಸದ್ಧರ್ಮ. ಅದರಲ್ಲಿ ಸಾಗಾರ, ಅನಾಗಾರ ವೆಂದು ದ್ವಿವಿಧ. ಮೊದಲನೆಯದು ಶ್ರಾವಕರಿಗೆ. ಎರಡನೆಯದು

ಯತಿ ಜನರಿಗೆ. ಹೀಗೆ ಹೇಳಿದ ಬಳಿಕ ಕವಿ ಮೊದಲಿಗೆ ಶ್ರಾವಕ ಧರ್ಮವನ್ನು ಕುರಿತು ಹೇಳತೊಡಗಿದ್ದಾನೆ. ಮುಂದೆ ಸಮ್ಯಕ್ತ್ವವನ್ನು ಕುರಿತ ಆತನ ವ್ಯಾಖ್ಯಾನ ಸಾಗುತ್ತದೆ. 'ಸಪ್ತಪ್ರಕೃತಿಗಳ ಉಪಶಮದಿಂದ ಉಪಶಮ ಸಮ್ಯಕ್ತ್ವ' ಉಂಟಾಗುತ್ತದೆ. 'ಸಮ್ಯಕ್ತ್ವಕೆಂಟಂಗಗಳುಂಟು', 'ಸಮ್ಯಕ್ತ್ವಕೆಂಟುಗುಣಗಳುಂಟು'–ಹೀಗೆ ಕವಿಯ ವಿವರಣೆ ಸಾಗಿದೆ. ಇದರ ನಂತರ ಕವಿ ವೈದಿಕ ಜನರ ಕೆಲವು ಆಚಾರಗಳನ್ನು ಖಂಡಿಸುತ್ತಾನೆ. ಆ ಪದ್ಯಗಳನ್ನು ಕೆಳಗೆ ಉದ್ಧರಿಸಲಾಗಿದೆ.

ಹದಿನೆಂಟು ದೋಷವುಳ್ಳವರ ದೇವರೆಂದು
ವಧೆವುಳ್ಳದು ಧರ್ಮವೆಂದು
ವಧು ಪುತ್ರ ಗಂಧಂಗಳುಳ್ಳರ ಗುರುವೆಂ
ಬುದದುವೆ ತಾನೆ ಮೂಢತ್ವ (೩೬)

ವಸ್ತು ಪರೀಕ್ಷೆಯ ನರಿಯದಜ್ಞಾನದಿ
ಮತ್ತೆ ವರವನಾಸೆ ಮಾಡಿ
ಅತ್ಯಂತ ರಾಗ ದ್ವೇಷಿ ದೇವತೆಗಳು
ಪಾಸ್ತಿ ಅದುವೆ ದೇವಮೂಢ (೩೭)

ಗೋವಿನ ಪರಭಾಗಕೆ ವಂದನೆಗಳ
ಭಾವಪೂರ್ವಕ ಮಾಡುವುದು
ಸೇವಿಸಿದಡೆ ಪುಣ್ಯವಹ ಮೂತ್ರವನೆಂಬ
ಗಾವಿಲತನ ಲೋಕಮೂಢ (೪೦)

ಮಳಲು ಕಲ್ಲನುನ್ನತ ರಾಶಿಯ ಮಾಡಿ
ಸಲೆ ವಂದನೆಯ ಮಾಡುವುದು
ಬಲು ಕಮ್ಮರಿ ಅಗ್ನಿಯೊಳು ಬಿದ್ದಡೆ ಪುಣ್ಯ
ನೆಲಸುಗೆಂಬುದೆ ಲೋಕಮೂಢ (೪೧)

ನಿಗ್ರಂಥಾರಂಭ ಹಿಂಸೆಯೊಡನೆ ಕೂಡಿ
ಉಗ್ರಸಂಸಾರದಿ ತೊಳಲ್ವ
ದುರ್ಗತಿಯೀವ ಪಾಷಂಡಿಯು ಗುರುವೆಂಬ
ಅಜ್ಞಾನಿ ಪಾಷಂಡಿ ಮೂಢ (೪೪)

"ಹದಿನೆಂಟು ದೋಷವುಳ್ಳವರನ್ನು ದೇವರೆಂದು, ಹಿಂಸೆಯನ್ನು ಹೇಳುವಂತಹುದನ್ನು ಧರ್ಮವೆಂದು ತಿಳಿಯುವುದು ಮೂಢತ್ವ. ರಾಗದ್ವೇಷಿಗಳಾದವರನ್ನು ದೇವರು ಎನ್ನುವುದು ದೇವಮೂಢ. ಹಸುವಿಗೆ ಭಾವಪೂರ್ವಕವಾಗಿ ವಂದನೆ ಮಾಡುವುದು, ಹಸುವಿನ ಮೂತ್ರ ಸೇವಿಸಿದರೆ ಪುಣ್ಯ ಎಂದು ತಿಳಿಯುವುದು, ಕಲ್ಲು ಮಣ್ಣುಗಳ ರಾಶಿಯನ್ನು ಹಾಕಿ ವಂದನೆ ಮಾಡುವುದು–ಇವೇ ಮೊದಲಾದವು ಲೋಕಮೂಢ. ಉಗ್ರವಾದ ಸಂಸಾರದಲ್ಲಿ ತೊಳಲುವಂತಹ ದುರ್ಗತಿಯನ್ನು ಕೊಡುವ ಪಾಷಂಡಿಯನ್ನು ಗುರು ಎನ್ನುವುದು ಪಾಷಂಡಿಮೂಢ." ಈ ಮೂರು ಮೌಢ್ಯ ಗಳನ್ನು ತೊಲಗಿಸಿ, ಜಿನನನ್ನು ದೇವನೆಂದು ಪೂಜಿಸಬೇಕು. ಮತ್ತೆ ಕವಿ ಸಮ್ಯಕ್ತ್ವದ ಮಹಿಮೆಯನ್ನು ಹೇಳುತ್ತಾನೆ. ಬಳಿಕ ದರುಶನಿಕ, ವ್ರತಿಕ ಮೊದಲಾದ ಏಕಾದಶ ನೆಲೆಗಳನ್ನು ಹೇಳಿರುವನು. ಇಲ್ಲಿನ ನಿರೂಪಣೆಯಂತೆ ಮದ್ಯ, ಮಾಂಸ, ಮಧು–ಮೊದಲಾದುವನ್ನು ತೊರೆದು ಧರ್ಮವನ್ನು ಚೆನ್ನಾಗಿ ತಿಳಿದಿರುವವನು ಶುದ್ಧ ದಾರ್ಶನಿಕನೆನಿಸುತ್ತಾನೆ. ಇದಾದ ತರುವಾಯ ಕವಿ ಸಪ್ತವ್ಯಸನಗಳಾದ ಹುಸಿ, ಕಳವು–ಇತ್ಯಾದಿ ಗಳಿಂದ ಗತಿಗೆಟ್ಟವರ ಕಥೆಗಳನ್ನು ಉದಾಹರಿಸಿದ್ದಾನೆ. ದ್ಯೂತ ದಿಂದ ಪಾಂಡವರು, ಮಾಂಸಾಹಾರದಿಂದ ಬಕ, ಸುರಾಪಾನ ಮತ್ತು ರತಿಯಿಂದ ಯಾದವನೃಪರು, ವ್ಯಾಮೋಹದಿಂದ ಚಾರುದತ್ತ, ಬೇಟದಿಂದ ರಾವಣ, ಕಳ್ಳತನದಿಂದ ಶಿವಭೂತಿ–

ಇವರೆಲ್ಲರೂ ಕೆಟ್ಟು ಹೋದುದನ್ನು ಹೇಳಿ, ಅದಕ್ಕೆ ಪ್ರತಿಯಾಗಿ ಆಹಾರದಾನದಿಂದ ಶ್ರೀಮತಿ, ವಜ್ರಜಂಘ, ಶ್ರೀಷೇಣ- ಇವರುಗಳು, ಆವಾಸದಾನದಿಂದ ಸೂಕರ, ಔಷಧದಾನದಿಂದ ವೃಷಭಸೇನೆ ಮೊದಲಾದವರೆಲ್ಲಾ ಉತ್ತಮ ಗತಿಗಳನ್ನು ಪಡೆದುದನ್ನು ಹೇಳುತ್ತಾನೆ.

ದರ್ಶನಿಕರ, ವ್ರತಿಕರ ಗುಣಗಳನ್ನು ಹೇಳುವಲ್ಲಿ ಒಂದು ಪದ್ಯ ಹೀಗೆ ಬರುತ್ತದೆ:

ಆವನಾನೊರ್ವಂಗೆ ಸಕಲಸಾಮ್ರಾಜ್ಯವ
ತೀವಿದ ಭಂಡಾರವ
ಈವೆನು ನಿನ್ನ ಪ್ರಾಣವ ಕೊಡುಯೆಂದರೆ
ಈವವರುಂಟೆ ಲೋಕದೊಳು (೧೦೧)

ಈ ಪದ್ಯ ಮಾನವನಿಗೆ ಜೀವದ ಮೇಲೆ ಇರುವ ಮೋಹವನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಜೀವದಯವನ್ನು ಪಾಲಿಸಬೇಕಾದ ಕ್ರಮವನ್ನು ಕವಿ ೧೫-೨೦ ಪದ್ಯಗಳಲ್ಲಿ ವಿವರಿಸುತ್ತಾನೆ. ಅನಂತರ ಐದು ಅತಿಚಾರಗಳ ವರ್ಣನವಿದೆ. ರಾತ್ರಿ ಊಟ ಮಾಡುವವನಿಗೆ ಕೊಲ್ಲುವುದಿಲ್ಲ ಎಂಬ ವ್ರತವಿಲ್ಲ ಎಂದು ತಿಳಿಸಿದ ಕವಿ ವಿಜಯಣ್ಣ ರಾತ್ರಿ ಊಟ ಮಾಡುವುದರಿಂದ ಒದಗುವ ದೋಷಗಳನ್ನು ವರ್ಣಿಸಿದ್ದಾನೆ. ಹೋಸ ಎಂಬ ವ್ರತದ ನಡವಳಿಕೆಯ ಕ್ರಮವನ್ನೂ ತಿಳಿಸುತ್ತಾನೆ. ಈ ವ್ರತವನ್ನು ಆಚರಿಸುವವರಿಗೆ ಒಂದು ವರುಷಕ್ಕೆ ಆರು ತಿಂಗಳು ಉಪವಾಸ ಮಾಡಿದಷ್ಟು ಪುಣ್ಯದ ಫಲ ದೊರೆಯುವುದು ಎಂದಿದ್ದಾನೆ. ಎಂದಿನಂತೆ ಈ ಮಾನವ ಜನ್ಮ ಸಿಗುವುದು ದುರ್ಲಭ ಎನ್ನುವುದನ್ನು ಮರೆಯದೆ ಹೇಳಿದ್ದಾನೆ. (೨೭೩)

ಶ್ರಾವಕ ನೆಲೆಗಳಾದ ಶೀಲವ್ರತ ಸಾಮಾಯಿಕ-ಮೊದಲಾದ ಒಂದೊಂದನ್ನೂ ಕವಿ ವಿಶೇಷವಾದ ಆಸ್ಥೆಯಿಂದ ಬಣ್ಣಿಸುತ್ತಾನೆ. ಜಿನಮುನಿಯನ್ನು ಸತ್ಕರಿಸುವ ಬಗೆಯನ್ನು ಕವಿ ತುಂಬಾ ಆತ್ಮೀಯ ಭಾವದಿಂದ ವರ್ಣಿಸಿದ್ದಾನೆ. ಮುನಿಯನ್ನು ನೋಡಿ ದೊಡನೆಯೇ 'ನಿಕ್ಷೇಪಂಬಡೆದ ಬಡವನಂತೆ ರಾಗಿಸಿ' ಇದಿರು ಗೊಂಡು ಸತ್ಕರಿಸಬೇಕು.

ಮನೆಗಯಿತರೆ ಸತ್ಪಾತ್ರವ ಕಂಡಿದು
ಮುನಿರೂಪಿನ ಕಲ್ಪವೃಕ್ಷ
ಎನಗಭಿಮತ ಫಲವೀಯಲು ಬಂದುದೆಂ
ದನುಪಮ ಸಂಭ್ರಮದಿಂದ (೩೪೪)

ಹೀಗೆ ಸಂಭ್ರಮದಿಂದ ಮುನಿಯನ್ನು ಇದಿರುಗೊಂಡು ಯಥೋಚಿತವಾಗಿ ಉಪಚಾರ ಮಾಡಬೇಕು. ನಿರವದ್ಯವೂ, ದೂಷಿತ ವಲ್ಲದೂ ಆದ ವಸ್ತುಗಳನ್ನು ಸನ್ಮುನಿಗೆ ಕೊಡಬೇಕು. ಆಗ 'ಸ್ವಾತಿಯ ಮಳೆಯ ಬಿಂದುಗಳು ಸಮುದ್ರದ ಶುಕ್ತಿಯೊಳು ಬೀಳಲದುವು ಮೌಕ್ತಿಕವಪ್ಪಂತೆ' ಉತ್ತಮ ಪಾತ್ರಕ್ಕೆ ಇತ್ತ ದಾನಗಳು ಉತ್ತಮ ಫಲಗಳನ್ನೇ ಕೊಡುವುವು.

ಒಟ್ಟಿನಲ್ಲಿ ಸಂಸಾರಿಧರ್ಮ, ಯತಿಧರ್ಮ, ಅಣುವ್ರತಗಳು, ಅತಿಚಾರಗಳು, ಅವುಗಳಲ್ಲಿನ ಭೇದಗಳು, ಲೌಕಿಕಧರ್ಮಗಳು, ಚತುರ್ಗತಿಗಳು, ದಶಧರ್ಮಗಳು, ದಶವಿದಪರಿಗ್ರಹಗಳು, ಮೂಢ ತ್ರಯಗಳು, ಎಂಟುಮದಗಳು, ಹದಿನೆಂಟು ದೋಷಗಳು, ಏಕಾದಶ ನೆಲೆಗಳು-ಮುಂತಾದುವುಗಳೆಲ್ಲದರ ವಿವೇಚನೆ ಈ ಹನ್ನೊಂದನೆಯ ಪರಿಚ್ಛೇದದಲ್ಲಿ ಬರುವುದು.

ಇನ್ನು ಕೊನೆಯದು ಬೋಧಿದುರ್ಲಭಾನುಪ್ರೇಕ್ಷೆ. ಕೆಲವು

ಹಿಂದಿನ ಗ್ರಂಥಗಳಲ್ಲಿ ಬೋಧಿದುರ್ಲಭವನ್ನು ಹೇಳಿದ ಮೇಲೆ ಧರ್ಮಾನುಪ್ರೇಕ್ಷೆಯನ್ನು ಹೇಳಿರುವುದುಂಟು. ವಿಜಯಣ್ಣನು ಬಹುಶಃ ತಾನು ನೋಡಿದ ಗ್ರಂಥಗಳ ಆಧಾರದ ಮೇಲೆ ಧರ್ಮವನ್ನು ಹೇಳಿ ಕೊನೆಯಲ್ಲಿ ಬೋಧಿದುರ್ಲಭವನ್ನು ಹೇಳುತ್ತಿದ್ದಾನೆ.

ಸಂವರ, ನಿರ್ಜರ ಅನುಪ್ರೇಕ್ಷೆಗಳನ್ನು ವಿವರಿಸಿದಂತೆ ಇದನ್ನೂ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ನಾರಕ ಮತ್ತು ತಿರ್ಯಕ್ ಯೋನಿಗಳಲ್ಲಿ ತೊಳಲಿದ ಜೀವ 'ಬೀದಿಯಲ್ಲಿ ಬಿದ್ದ ರತ್ನವನ್ನು ಪಡೆದಂತೆ' ಅಸಾಧ್ಯವಾದ ಮನುಷ್ಯ ಭವವನ್ನು ಪಡೆದಾಗಲೂ ಧರ್ಮದಿಂದ ನಡೆಯದೆ ಪಾಪಕಾರ್ಯಗಳಲ್ಲಿ ತೊಡಗುವುದು.

"ಧನಿಕನಾದರೂ ಇಂದ್ರಿಯಗಳ ಪರಿಪೂರ್ಣತೆ ಇರುವುದು ದುರ್ಲಭ. ಇಂದ್ರಿಯಗಳು ಸಂಪೂರ್ಣವಾಗಿದ್ದರೂ ಶರೀರವು ನಿರೋಗವಾಗಿರುವುದು ದುರ್ಲಭ. ಆರೋಗ್ಯಪೂರ್ಣವಾದ ಶರೀರವನ್ನು ಪಡೆದರೂ ದೀರ್ಘಾಯುಷ್ಯವೆನ್ನುವುದು ಅಸಾಧ್ಯ. ದೀರ್ಘಾಯುಷ್ಯ ಪಡೆದರೂ ಒಳ್ಳೆಯ ಗುಣಗಳಿರುವುದು ದುರ್ಲಭ. ಒಳ್ಳೆಯ ಗುಣಗಳನ್ನು ಪಡೆದರೂ ಸಮ್ಯಕ್ತ್ವವನ್ನು ಸಾಧಿಸುವುದು ಮಾತ್ರ ಅತ್ಯಂತ ಕಷ್ಟತರವಾದುದು. ಇದನ್ನು ಹೇಗೋ ಸಾಧಿಸಿದರೂ ಸುಜ್ಞಾನ ಚಾರಿತ್ರವೆನ್ನುವುದು ಮತ್ತೂ ಕಷ್ಟ. ಕಡೆಗೆ ರತ್ನತ್ರಯವನ್ನು ಗಳಿಸಿಕೊಂಡರೂ ಕ್ರೋಧವೇ ಮೊದಲಾದ ಕಷಾಯಗಳಿಂದ ಅದನ್ನು ನಾಶಪಡಿಸಿಕೊಂಡು ದುರ್ಗತಿಗೆ ಎಡೆಯಾಗುವನು."

ಈ ಕಾರಣಗಳಿಂದಾಗಿ ದುರ್ಲಭವಾದ ನರಜನ್ಮ ದೊರೆತಾಗ ಅದನ್ನು ರತ್ನದಂತೆಯೇ ಭಾವಿಸಿ, ಮಿಥ್ಯಾತ್ವ. ಅವ್ರತ, ಕಷಾಯ–ಇವನ್ನೆಲ್ಲವನ್ನೂ ತೊರೆಯಬೇಕು. ತಪ, ದಾನ, ಶೀಲ,

ಪೂಜೆ–ಇವೇ ಮೋಕ್ಷವನ್ನು ಪಡೆಯಲು ಮುಖ್ಯವಾದವು. “ಅನರ್ಘ್ಯವಾದ ರತ್ನವನ್ನು ಬೂದಿಯಲ್ಲಿ ಮುಚ್ಚಿ ಸುಡುವವನಂತೆ” ವರ್ತಿಸದೆ, ವಿಷಯ ಸುಖವನ್ನು ಆಶಿಸದೆ, ಮೋಕ್ಷಸುಖವನ್ನೇ ಉದ್ದೇಶಿಸಿ, ರತ್ನತ್ರಯವನ್ನು ಬಹುಪ್ರಯತ್ನದಿಂದ ಕಾಪಾಡಿಕೊಳ್ಳಬೇಕು ಎಂದು ಕವಿ ಹೇಳಿದ್ದಾನೆ.

ಅಜ್ಞಾನ, ಮೋಹ, ಇಂದ್ರಿಯಗಳ ವ್ಯಾಮೋಹ–ಇವನ್ನು ಪರಿಹರಿಸುವ ಸುಜ್ಞಾನ, ದರ್ಶನ, ಚಾರಿತ್ರ್ಯ ಎಂಬ ಮೂರು ರತ್ನಗಳು ಅತಿ ದುರ್ಲಭವೆಂದು ಭಾವಿಸುವುದೇ ಬೋಧಿದುರ್ಲಭಾನುಪ್ರೇಕ್ಷೆ.

ಹೀಗೆ ದುರ್ಲಭವಾದುದನ್ನು ಪಡೆಯಲು ಜಿನಮಾರ್ಗವನ್ನು ನಂಬಿ ನಡೆಯಬೇಕು ಎಂದು ತಿಳಿಸುವುದೇ ಅನುಪ್ರೇಕ್ಷೆಗಳ ಒಟ್ಟರ್ಥ. ಮನುಷ್ಯನಿಗೆ ದೇಹದ ಮೇಲೆ ಇರುವ ಅಭಿಮಾನವನ್ನು ಬಿಡಿಸಿ ವೈರಾಗ್ಯಭಾವನೆಯ ನಿರ್ಣಯವನ್ನು ಉಂಟುಮಾಡಲು ಕವಿ ನಾನಾ ಬಗೆಯಲ್ಲಿ ಹೇಳುತ್ತಾನೆ. ಜೀವವೊಂದಕ್ಕೆ ಬೋಧನೆ ಮಾಡಿದಂತೆ ಆತನ ನಿರೂಪಣೆ ಇದೆ. ಈ ವ್ಯಾಖ್ಯಾನಕ್ಕಾಗಿ ಕವಿ ನೂರಾರು ಹೋಲಿಕೆಗಳನ್ನು ಬಳಸಿಕೊಂಡಿದ್ದಾನೆ. “ಮನೋಹರ ಮಪ್ಪ ವಸ್ತುಗಳೆಲ್ಲ ಮುನ್ನ ಕಂಡ ಸ್ವಪ್ನದಂತೆ, ಸುವರ್ಣದ ಹರಿವಾಣದಿ ಮಣ್ಣನಿರದೆ ತೀವುವ ಮರುಳನಂತೆ, ಹಱಿದಿರ್ದ ಹಱುಗೋಲ ನಱದೇಱ ಮುಳುಗುವ ಕರಮರುಳನಂತೆ, ಉನ್ನತ ವೃಕ್ಷದ ಫಲಗಳು ಪಕ್ವಕೆ ತನ್ನ ತಾನೆ ಬಪ್ಪಂತೆ, ಪಕ್ವಕೆ ಬಾರದ ಫಲವನುಪಾಯದಿ ಪಕ್ವವನೆಯ್ದಿಸುವಂತೆ, ಕಡುಕಿಟ್ಟ ಕಾಳಿಕೆಯೊಡಗೂಡಿದ ಹೇಮ ಬಿಡದಗ್ನಿ ಪುಟದಿ ಶುದ್ಧತೆಯ ಒಡಗೂಡುವಂತೆ, ಸ್ವರ್ಣವ ಕೊಂಬಾತ ನೊರೆದು ಕತ್ತರಿಸಿಯೆ ಮನ್ನಿಸಿದಿದ ಮತ್ತೆ ಕಾಸಿ ಉನ್ನತ ತಾಡನದಿಂದ

ಪರೀಕ್ಷಿಸಿ ಚೆನ್ನಾಗಿ ನೋಡಿಕೊಂಬಂತೆ"—ಹೀಗೆ ಹೋಲಿಕೆಗಳ ಸರಮಾಲೆಯನ್ನು ಕಂಡಾಗ ವಿಜಯಣ್ಣನ ಈ ಗ್ರಂಥವನ್ನು ಸೂಕ್ತಿ ಭಂಡಾರವೆಂದು ಕರೆಯಬಹುದು. ಆತನ ಕೃತಿ ಸಾಮಾನ್ಯ ಜನರಿಗೂ ಆಸಕ್ತಿಯನ್ನು ಹುಟ್ಟಿಸಲು ಈ ಹೋಲಿಕೆ ಅಥವಾ ಸೂಕ್ತಿಗಳೇ ಮುಖ್ಯ ಕಾರಣವಾಗಿವೆ. ತತ್ತ್ವಚಿಂತನೆಗಳು ಅರ್ಥಪೂರ್ಣವೆನಿಸಲು ನೆರವಿತ್ತಿವೆ.

ವಿಜಯಣ್ಣ ಜೀವಸಂಬೋಧನೆ ಎಂಬ ಚಂಪೂಗ್ರಂಥವನ್ನು ಗಮನಿಸಿದ್ದಾನೆ ಎನ್ನುವುದಕ್ಕೆ ಇಲ್ಲಿ ಕೆಲವು ಉದ್ಧರಣಗಳನ್ನು ತೋರಿಸಬಹುದು.

## ಜೀವ ಸಂಬೋಧನೆ

ಮದಕರಿಯುಪ್ಪುದೊಂದೆಡೆಯೊಳ್ ನರಿ
ಯುಪ್ಪುದೊಂದು ಜನ್ಮದೊಳಱಿ
ನಾಯುಮುಪ್ಪುದಿರ ವೊಂದೆಡೆಯೊಳ್ ನೃಗ
ರಾಜರೂಪನ (೫–೨೬)

ಪರಿಣಾಮದ ಪೊಲ್ಲಮೆಗಳ್
ದೊರೆಕೊಳೆ ಬಿಡದೊದವಿ ಬಪ್ಪಪಾಪಾಸ್ರವಮಂ
ಬರಲೀಯದೆ ಪದಿಮೂಱುಂ
ಚರಿತ್ರದಿಂ ನೆಗಱ್ವಿಮಾಳ್ಕೆಸಂವರೆಯಕ್ಕುಂ (೯–೧)

## ದ್ವಾದಶಾನುಪ್ರೇಕ್ಷೆ

ಮದಕರಿಯುಪ್ಪುದು ಜನ್ಮಾಂತರದೊಳ್
ಒದವಿದ ಜಂಬುಕನಹುದು
ಪುದಿದಕೇಸರಿಯುಪ್ಪುದೊಂದೆಡೆಯಲಿಮತ್ತೆ
ಮದಹೀನಶ್ವಾನವಾಗುವುದು (೫–೨೨)

ಪರಿಣಾಮಪೊಲ್ಲಮೆಯಿಂದಲ್ಲದೆ
ಬರುತಿಹ ಪಾಪಾಸ್ರವವ
ಬರಲೀಯದೆ ಸಮ್ಯಕ್ತ್ವಚಾರಿತ್ರವ
ಧರಿಯಿಸುವುದೆ ಸಂವರೆಯು (೯–೨)

ಧರ್ಮವಾನಾದಿಯಿನೊದವಿದ
ಕರ್ಮದಕೇಡಿಂಗೆ ಮೂಲಮದಜಿ್ಂಜೀವ
ಕ್ಕಾರ್ಮಂ ಪೆರದಾವುದೊ ಸಾ
ಸಿರ್ಮಡಿಯಾಗೊದವಿ ಸುಖಮನೀಗುಂಕಾಗುಂ (೧೨-೧)

ಬಿಸಿಲ್ಕುದುರೆಯ ನೀರೆಂದಾಸೆವಟ್ಟು ಪರಿವ
ಮೃಗಮುಂ ಸಂಸಾರದೊಳ್ ತನಗಲ್ಲದವ
ಗರ್ಾಟಿಸಿ ಪಡೆವ ನರನುಂ ಸೇದೆವಡೆಗುಂ (೧–೪)

ಪುಟ್ಿತಕರ್ವಿನ ಮೊದಲ್ತಿನಲೊಳ್ಳಿತಲ್ತು
ಬಿತ್ತಿಂಗೊಳ್ಳಿತ್ತು ಮನುಷ್ಯರವೆಯ್
ಸುಖದನು ಭವಣೆಗೊಳ್ಳಿತಲ್ತು ಸುಗತಿ
ವಡೆಯಲೊಳ್ಳಿತ್ತು (೭–೨ ೪)

ಧರ್ಮಮನಾದಿಯಿನೊದವಿದ ಬಹುವಿಧ
ಕರ್ಮದ ಕೇಡು ಕಾರಣವು
ನಿರ್ಮಲ ಸುಖಕೆ ಕಾರಣವು ದಯಾಮೂಲ
ಧರ್ಮಮದುವೆ ಸದ್ಧರ್ಮ (೧೧-೩)

ಬಿಸಿಲು ಕುದುರೆಗಳ ನೀರೆಂದುಪರಿತಪ್ಪ
ಪಶುಜಾತಿಯವೊಲು ಜೀನ
ವಶವಲ್ಲದ ವಸ್ತುಗಳನು ನಿನಗೆಂದು
ಹಸಗೆಡದಿರು ನೀನೀಗ (೨೦-೩)

ಹುಳಿದ ಕಬ್ಬುನೆಲಲೊಳ್ಳಿತ್ತೆ ಬಿತ್ತಲು
ಫಲವ ಕೊಳ್ಳಲೊಳ್ಳಿತಂತೆ
ಅಳಿದೇಹ ಮುಂದಣ ಗತಿಗೊಳ್ಳಿತು ಇಲ್ಲಿ
ಫಲವಿಲ್ಲ ಸುಖದನುಭವಣೆ (೮-೬೮)

ಹೀಗೆ ವಿಜಯಣ್ಣನ ಕೃತಿಯಲ್ಲಿ ಬಂಧುವರ್ಮನ ಕೃತಿಯ ಪ್ರಭಾವವನ್ನು ಕಾಣುತ್ತೇವೆ. ಇದಲ್ಲದೆ ವಿಜಯಣ್ಣ ಇತರ ಸಂಸ್ಕೃತ, ಪ್ರಾಕೃತ ಗ್ರಂಥಗಳಿಂದಲೂ ಪ್ರಭಾವ ಪಡೆದಿರಬಹುದು. ಆದ್ದರಿಂದ ಆ ಭಾಷೆಗಳನ್ನು ಬಲ್ಲ ಕನ್ನಡಿಗರು ಇದನ್ನು ಹೋಲಿಸಿ ವಿಜಯಣ್ಣನ ನೆಲೆ, ಬೆಲೆಗಳನ್ನು ನಿಷ್ಕೃಷ್ಟವಾಗಿ ಕಟ್ಟಬೇಕು. ಆಗ ಮಾತ್ರ ವಿಜಯಣ್ಣನ ಸ್ಥಾನದ ಬಗ್ಗೆ ಸ್ಪಷ್ಟ ಕಲ್ಪನೆ ಬರಲು ಸಾಧ್ಯ.

ಪ್ರಾಕೃತದಲ್ಲಿ ಕುಂದಕುಂದರ "ಬಾರಿಸ ಅಣು ವೆಕ್ಖಾ", ಸ್ವಾಮಿ ಕುಮಾರರ "ಕೃತ್ತಿಗೇಯಾಣುಪೆಕ್ಖಾ" ಮೊದಲಾದವುಗಳು, ಸಂಸ್ಕೃತದಲ್ಲಿ ಸೋಮದೇವನ "ಯಶಸ್ತಿಲಕ" (೧೦ನೆಯ ಶತಮಾನ), ವಾದೀಭಸಿಂಹನ "ಕ್ಷತ್ರಚೂಡಾಮಣಿ" (೧೧ನೆಯ ಶತಮಾನ) ಮೊದಲಾದವು ಅನುಪ್ರೇಕ್ಷೆಗಳನ್ನು ಕುರಿತು ಬರೆದಂತಹ ಕೃತಿಗಳು. ಇವು ವಿಜಯಣ್ಣನ ಕೃತಿಗಿಂತ ಮೊದಲು ರಚಿತವಾದವುಗಳು. ಇದರಿಂದ ನಮ್ಮ ಈ ಸಾಂಗತ್ಯ ಕೃತಿಯ ಸ್ವಂತಿಕೆ ಯಾವ ಬಗೆಯದು ಎಂದು ತಿಳಿಯಲು ಈ ಬಗ್ಗೆ ಇನ್ನೂ ಅಧ್ಯಯನ ನಡೆಯಬೇಕಾಗಿದೆ. ಆದರೆ ದ್ವಾದಶಾನುಪ್ರೇಕ್ಷೆಗಳೆಷ್ಟನ್ನೂ ಒಟ್ಟಾಗಿ, ಸರಳವಾಗಿ ಬರೆದು ಕನ್ನಡಕ್ಕೆ ತಂದು ಕೊಟ್ಟ ಕೀರ್ತಿ ವಿಜಯಣ್ಣನಿಗೆ ಇದ್ದೇ ಇದೆ. ಧರ್ಮಶಾಸ್ತ್ರವನ್ನು ಸಾಂಗತ್ಯದಲ್ಲಿ ಮೊದಲಿಗೆ ತಂದದ್ದೂ ಆತನ ಸಾಧನೆಯೇ.

ದ್ವಾದಶಾನುಪ್ರೇಕ್ಷೆ ಸುಲಲಿತವಾಗಿ ಸಾಗುತ್ತದೆ. ಕೇವಲ ತತ್ತ್ವವನ್ನೇ ಹೇಳುವ ಉದ್ದೇಶವನ್ನು ವಿಜಯಣ್ಣ ತಳೆದಿದ್ದರೂ ಅಲ್ಲಲ್ಲಿ ಕೆಲವು ಕಥೆಗಳನ್ನು ಉಲ್ಲೇಖಿಸುವುದರ ಮೂಲಕ ಮತ್ತು ನಿಜಜೀವನದ ಆಚರಣೆಯ ಕೈದೀವಿಗೆಯಂತಿರುವ ರಸವತ್ತಾದ ಹೋಲಿಕೆಗಳನ್ನು ಬಳಸಿಕೊಳ್ಳುವುದರ ಮೂಲಕ

ತನ್ನ ಕೃತಿಯನ್ನು ಚಪ್ಪರಿಸಿ ಸವಿಯುವಂತೆ ಮಾಡಿದ್ದಾನೆ. ಜೈನಧರ್ಮೇತರರಿಗೂ ಹಿತವಾಗುವ ರೀತಿಯಲ್ಲಿ ವಿಜಯಣ್ಣ ತನ್ನ ಕೃತಿಯನ್ನು ರಚಿಸಿದ್ದಾನೆ. ಈ ಮಾತು ದ್ವಾದಶಾನುಪ್ರೇಕ್ಷೆಯ ಅಗ್ಗಳಿಕೆಯನ್ನೇ ಸಾರುತ್ತದೆ.

ಆಕರ ಗ್ರಂಥಗಳು :

1. ವಿಜಯಣ್ಣ ವಿರಚಿತ ದ್ವಾದಶಾನುಪ್ರೇಕ್ಷೆ
ಸಂ. ಕೆ. ಆರ್. ಶೇಷಗಿರಿ
ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ [1975]

2. ಬಂಧುವರ್ಮ ಕವಿ ವಿರಚಿತ ಜೀವಸಂಬೋಧನಂ
ಸಂ. ಪಂಡಿತ ಎಚ್. ಶೇಷಯ್ಯಂಗಾರ್
ಮದರಾಸು ವಿಶ್ವವಿದ್ಯಾನಿಲಯ [1955]

WO 22464—MUPM—5,000—22-5-81

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ಟಿ. ಎನ್. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ಟಿ. ಎಸ್. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣ
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಉ. ಕಾ. ಸುಬ್ಬರಾಯಾಚಾರ್
೫೬. ಶ್ರೀ ಸಮರ್ಥರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ